# ಕೊಡಗು ಸಂಗಾತಿ


ಮೇ 1 ರಿಂದ 31, 2004 | ಪಾಕ್ಷಿಕ ಪತ್ರಿಕೆ | (ಪಗ್ಗು 18-31 , ಬೇಶ 1-17 )

12058, ಸಂಗಾತಿ ನಿಲಯ, ವಿಜಯನಗರ 4ನೇ ಹಂತ, 2ನೇ ಘಟಕ, ಹಿನ್‌ಕಲ್ ಅಂಚೆ, ಮೈಸೂರು - ೫೭೦ ೦೧೭

ಸಂಪಾದಕಿ : ಪಟ್ಟಡ ಶೀಲಾಮಣಿ RNI No. : 10-01-96 TCI Kar. 09592 ಕನ್ನಡ ಮತ್ತು ಅರೆಭಾಷೆಲಿ ಪ್ರಕಟಿತ

KA / SK / MYS / 88 / 2003-05, ಸಂಪುಟ : 8 ಸಂಚಿಕೆ : 3-4 ಪುಟಗಳು : 24 ಬೆಲೆ : 12-00 ರೂ.





: ಲೇಖನ ಒಳಪುಟದಲ್ಲಿ

## ಕರ್ನಾಟಕ ರಾಜ್ಯದ ಮೂರು ತಾಲೂಕುಗಳ ಪುಟ್ಟ ಜಿಲ್ಲೆ

**ಪ್ರಕಟಣೆ :** ಸುಶ್ರುತ ಆಯುರ್ವೇದ ಚಿಕಿತ್ಸಾಲಯ ಹಾಗೂ ಕೇರಳ ಆಯುರ್ವೇದ ಫಾರ್ಮಸಿ

ಪೂಜಾ ಆರ್ಕೇಡ್, ಜೂನಿಯರ್ ಕಾಲೇಜು ರೋಡು, ಮಡಿಕೇರಿ.



ಇಲ್ಲಿ ದಮ್ಮು, ಕೆಮ್ಮು, ಸೊಂಟನೋವು, ಗಂಟಲು ನೋವು, ಚರ್ಮರೋಗ, ತಲೆನೋವು, ಸಕ್ಕರೆಕಾಯಿಲೆ, ಸ್ತ್ರೀರೋಗಗಳು, ಪೈಲ್ಸ್, ಗ್ಯಾಸ್ಟ್ರೈಟಿಸ್ ಇನ್ನಿತರ ರೋಗಗಳನ್ನು ತಪಾಸಣೆ ನಡೆಸಿ ಚಿಕಿತ್ಸೆ ನೀಡಲಾಗುವುದು. ಉತ್ತಮ ಆರ್ಯುವೇದ ಔಷಧಿಗಳೂ ದೊರಕುವುದಲ್ಲದೆ ಪಂಚಕರ್ಮ (ಆಯಿಲ್ ಮಸಾಜ್) ಚಿಕಿತ್ಸೆಯೂ ಲಭ್ಯವಿದೆ. ವೈದ್ಯಕೀಯ ಸಲಹೆಗಳನ್ನು ನೀಡಲಾಗುವುದು.

ಡಾ.ಭಾರತಿ ಎ.ಪಿ., ಎಂ. ಡಿ. ಒಮ್ಮೆ ಬಂದವರು ಆರೋಗ್ಯವಾಗಿ ತೆರಳಿದ್ದಾರೆ. ಬಂದುಗಳೇ ಒಮ್ಮೆ ಸಂಪರ್ಕಿಸಲು ಮರೆಯದಿರಿ.
ಆಯುರ್ವೇದ

**ಸಮಯ : 9-30 a.m. to 1 p.m., 3-30 p.m. to 7 p.m.**

---

**ವಿಶೇಷ ಪ್ರಕಟಣೆ :** ಇದೇ ತಿಂಗಳ ಮೇ 3-16 ರ ತನಕ ಮಡಿಕೇರಿಯಲ್ಲಿರುವ ಮ್ಯಾನ್ಸ್ ಕಾಂಪೌಂಡ್ಸ್ ಕ್ರೀಡಾಂಗಣದಲ್ಲಿ ಗೌಡ ಕೌಟುಂಬಿಕ ಕ್ರಿಕೆಟ್ ಕಪ್ ಪಂದ್ಯಾಟ ನಡೆಯಲಿದೆ. ಆ ಸಮಯದಲ್ಲಿ ಕೊಡಗು ಸಂಗಾತಿ, ಕಾರ್ಯ ನಿರ್ವಾಹಕರು ಹಾಜರಿರುತ್ತಾರೆ. ಸಂಗಾತಿ ಚಂದದಾರರು ಹಾಗೂ ಬಾಕಿದಾರರು ನವೀಕರಿಸಿಕೊಳ್ಳುವಂತೆ ಸವಿನಯ ಪ್ರಾರ್ಥನೆ. ಕೌಂಡಿನ್ಯನವರ "ಮಹಾ ಮಂತ್ರ" ಇದೆ ಮೇ ತಿಂಗಳಿಂದ ವಾಮಾಚಾರ ಕಾದಂಬರಿ ಭಯಂಕರ ಕೌತುಕಮಯವಾಗಿ ಮೂಡಿ ಬರಲಿದೆ. ಬಂಧುಗಳೇ ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಲು ಮರೆಯದಿರಿ.

**- ಪಟ್ಟಡ ಶೀಲಾಮಣಿ, ಸಂಪಾದಕಿ**

---

**ಪ್ರಕಟಣೆ :** ಜನಪ್ರಿಯ ಸರ್ಪಗಂಧ ಧಾರವಾಹಿಯ ಹೆಸರಾಂತ ಕಾದಂಬರಿಗಾರ ಕೌಂಡಿನ್ಯ ವಿರಚಿತ 201 ನೇ ಕೌತುಕಮಯ ಕಾದಂಬರಿ "ಮಹಾ ಮಂತ್ರ" 3 ಪುಟಗಳಲ್ಲಿ 40 ತಿಂಗಳು ಮೂಡಿ ಬರಲಿದೆ. ಪ್ರಾಯೋಜಕರು ಸಂಪರ್ಕಿಸಬಹುದು. ದಂಪತಿಗಳ ಫೋಟೋ ಸಹಿತ 40 ತಿಂಗಳು ಪ್ರಕಟಿಸಲಾಗುವುದು. ತ್ವರಿತಮಾಡಿ

**C/o ಕೊಡಗು ಸಂಗಾತಿ, ಮೈಸೂರು Ph.: 0821-2404290**

---

**ಏರ್‌ಫೋರ್ಸ್ ಕ್ಯಾಂಟೀನ್, ಮೈಸೂರು; ಮಾಜಿ ಸೈನಿಕರಿಗೊಂದು ಸೂಚನೆ :** ಈ ಕೆಳಕಾಣಿಸಿದ ಮುಂದಿನ ದಿನಾಂಕಗಳ ಭಾನುವಾರಗಳಂದು "ಏರ್‌ಫೋರ್ಸ್ ಕ್ಯಾಂಟೀನ್" ಮಾಜೀ ಯೋಧರಿಗಾಗಿ ತೆರೆದಿರುತ್ತದೆ. ಹಾಗೂ ಈ ಭಾನುವಾರಗಳ ನಂತರ ಬರುವ ಎಲ್ಲಾ ಸೋಮವಾರಗಳು ರಜಾ ದಿನಗಳಾಗಿರುತ್ತವೆ.ಉದಾ : (ಅಂದರೆ 2/5/04 ಭಾನುವಾರ ತೆರೆದಿರುತ್ತದೆ. 3/5/04 ಸೋಮವಾರ ರಜೆ, ) 2/5/2004, 9/5, 6/6, 13/6, 4/7, 11/7, 1/8. 8/8, 5/9, 12/9, 3/10, 10/10, 7/11, 14/11, 5/12, 12/12/2004 ಇದರ ಪ್ರಯೋಜನ ಪಡೆದುಕೊಳ್ಳುವಂತೆ ವಿನಂತಿಸಲಾಗಿದೆ.

**- ಸಂಗಾತಿ ಫೋರ್ಸ್ ನ್ಯೂಸ್.**

---

**ಜೀವಾವಧಿ ಸದಸ್ಯತನ ನೀಡಿದ್ದಾರೆ:** ಮೂಲತಃ ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲೂಕಿನ ಕರಿಂಜೆ ಅಂಚೆಯ, ರಾಜಮಾರ್ ಮನೆತನದ ದಿವಂಗತ ಶಿವಪ್ಪಗೌಡರ ಮಗ ವೀರಸೇನಾ, ನಿವೃತ್ತ ಸಿಂಡಿಕೇಟ್ ಬ್ಯಾಂಕಿನ ಉದ್ಯೋಗಿ ಇವರು "ಕೊಡಗು ಸಂಗಾತಿ" ಹಿತ ಬಯಸಿ ಜೀವಾವಧಿ ಸದಸ್ಯತನ ನೀಡಿರುತ್ತಾರೆ. ಇವರ ಪತ್ನಿ ರೇವತಿ. ಮಗಳು ರಶ್ಮಿ ಆರ್. ವಿ., ಎಂ. ಎಸ್ಸ್. ಸಿ. ಎರಡನೇ ಸೆಮಿಸ್ಟರ್‌ನಲ್ಲಿ ಓದುತ್ತಿದ್ದಾಳೆ. ಈ ಪುಟ್ಟ ಸಂಸಾರಕ್ಕೆ ಶ್ರೀ ಕುಲಗುರು ವೆಂಕಟರಣನು ಮತ್ತು ಶೃಂಗೇರಿ ಶಾರದಾಂಬೆಯರ ಆಶೀರ್ವಾದ ಸದಾ ಇರಲೆಂಬುದಾಗಿ ಶುಭ ಬಯಸುತ್ತೇವೆ.

**ಸಂಪಾದಕಿ : ಪಟ್ಟಡ ಶೀಲಾಮಣಿ ಪ್ರಭಾಕರ**

---

## ಶುಭ ಹಾರೈಕೆ



ಕೆ. ಬಿ. ಉಷಾ

ಬೆಂಗಳೂರು ನಿವಾಸಿ, ಕನ್ನಡ್ಕ ಭೀಮಯ್ಯನವರ ಪುತ್ರಿ ಕೆ. ಬಿ. ಉಷಾ ಇವರು ಬೆಂಗಳೂರು ವಿಶ್ವವಿದ್ಯಾಲಯದ 2003 ರ ಅಂತಿಮ ಎಂ. ಕಾಂ. ಪರೀಕ್ಷೆಯಲ್ಲಿ ಎರಡನೇ ರ್‍ಯಾಂಕ್ ಗಳಿಸಿ ನಾಡಿಗೂ, ಜನಾಂಗಕ್ಕೂ ಕೀರ್ತಿ ತಂದಿರುತ್ತಾರೆ. ಇವರಿಗೆ ಇನ್ನೂ ಉತ್ತಮ ಭವಿಷ್ಯವನ್ನು ಆ ಪರಮಾತ್ಮ ನೀಡಲೆಂದು ಶುಭ ಹಾರೈಸುತ್ತೇನೆ.

**ಯಿಂದ : ಸಹೋದರ, ಕನ್ನಡ್ಕ ರವಿಕಿರಣ್ ಭೀಮಯ್ಯ**

**ಫೋನ್ : 080/23532361 Mobile : USHA-9845884362**



# 2004, ಮೇ 1 ರಿಂದ 31ರ ತನಕ

ಒಳನೋಟ




| | |
|---|---|
| ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ ಮತ್ತು ಕೋರಿಯರ್ ಸರ್ವಿಸ್ ಇತ್ಯಾದಿ | ಕೊಡಗು ಸಂಗಾತಿ, 12058, ಸಂಗಾತಿ ನಿಲಯ, ವಿಜಯನಗರ 4ನೇ ಹಂತ, 2ನೇ ಘಟಕ, ಹಿನಕಲ್ ಅಂಚೆ, ಮೈಸೂರು - 17. ಫೋನ್: 0821/2404290<br>ಕುಂಟುಪುಣಿ ರಾಮಕೃಷ್ಣ, ಕಾವೇರಿ ಆಟೋಮೊಬೈಲ್, ರಿಂಗ್‌ರೋಡ್ ಸರ್ಕಲ್, ಹಿನಕಲ್ ಅಂಚೆ, ಮೈಸೂರು - 17 **Mobile : 94483-90855** |
| ಮಡಿಕೇರಿಯಲ್ಲಿ ಸಂಗಾತಿ ಕಛೇರಿ ಚಿಹ್ನೆ, ಹಸೆಮಣೆ ಪುಸ್ತಕ / ಚಾಂಪಾ ಶುಭಾಶಯ ಕಾರ್ಡ್ಸ್ / ಕುರುಂಜಿಯವರ ಕ್ಯಾಸೆಟ್ಸ್, ಅಮರಶ್ರೀ ಸ್ಮರಣ ಸಂಚಿಕೆ ಇತ್ಯಾದಿ ಲಭ್ಯ. : | ಕೊಡಗು ಸಂಗಾತಿ C/o ಪಾಂಡನ ಕಾಂಪೌಂಡ್, 21/4, (1), ಅಪ್ಪಯ್ಯ ಗೌಡ ರಸ್ತೆ, ಜೂನಿಯರ್ ಕಾಲೇಜು ಹತ್ತಿರ, ಮಡಿಕೇರಿ - 571 201<br>ಬೈತಡ್ಕ ಜಾನಕಿ ಬೆಳ್ಯಪ್ಪ ಫೋನ್ : 228047<br>ಪಾಂಡನ ರತಿ ಚಂದ್ರಶೇಖರ್ ಫೋನ್ : 228380 |
| ವಿರಾಜಪೇಟೆ | ಬಾರಿಕೆ ಮನೋಜ್‌ಕುಮಾರ್, ಇಗ್ಗುತ್ತಪ್ಪ ಕೋಲ್ಡ್ ಸ್ಟೋರ್, ಖಾಸಗಿ ಬಸ್ ನಿಲ್ದಾಣ, ವೀರಾಜಪೇಟೆ ಫೋನ್ : 08274/256591 |
| ಕುಶಾಲ ನಗರ | ಕುಂಭಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ - 571 234 ಫೋನ್ : 08276/273370 |
| ಬೆಂಗಳೂರು ಮಹಾನಗರ | ಸಂಗಾರು ಮೋದನ ಪ್ರಿಯ, ನಂ. 11, ಮೊದಲನೆ ಅಡ್ಡ ರಸ್ತೆ, ಪೆಮ್ಮಯ್ಯ ಬ್ಲಾಕ್, ಜೇಸಿನಗರ, ಬೆಂಗಳೂರು -560 006 Mobile : 94482 25160 |

ಚಂದಾ ವಿವರ : ಜೀವಾವಧಿ ಸದಸ್ಯತನ - **2000** ರೂ. ವಾರ್ಷಿಕ ಚಂದಾ - **150** ರೂ. (ಅಂಚೆ ವೆಚ್ಚ ಸೇರಿ),

ಕೊಡಗು ಸಂಗಾತಿಯನ್ನು ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಲು ಮರೆಯದಿರಿ.

# ಸಂಪಾದಕೀಯ : ಕೊಡಗಿಗೊಂದು ರೈಲು ಮಾರ್ಗ ಅವಶ್ಯಕ.

ದಿನ ದಿನಕ್ಕೆ ಪ್ರಪಂಚದ ದೂರ ಹತ್ತಿರವಾಗುತ್ತಿದ್ದರೂ ಕೊಡಗಿಗೊಂದು ರೈಲು ಮಾರ್ಗ ಅತೀ ಅವಶ್ಯ. ಜನ ಒಂದು ಊರಿನಿಂದ ಇನ್ನೊಂದು ಊರಿಗೆ ಹೋಗುವುದಕ್ಕೆ ಬೇಕಾದಷ್ಟು ವಾಹನ ಸೌಲಭ್ಯ ಇದೆ. ಆದರೆ ಕೊಡಗಿಗೆ ಈ ಯಾವುದೇ ಜನ ಉಪಯೋಗ ವಸ್ತುಗಳು ಹಾಗೂ ಕೊಡಗಿನ ಜನರು ಉತ್ಪತ್ತಿ ಮಾಡುತ್ತಿರುವ ವಸ್ತುಗಳಿಗೆ ಸರಿಯಾದ ಬೆಲೆ ಸಿಗಬೇಕಾದರೆ ಒಂದು ರೈಲು ಮಾರ್ಗ ಅತೀ ಅವಶ್ಯಕ.

ಮೈಸೂರಿನಿಂದ ಕುಶಾಲನಗರದವರೆಗಾದರೂ ಎಷ್ಟೋ ಸುಧಾರಣೆಯಾಗುತ್ತದೆ. ಕುಶಾಲನಗರದವರೆಗೆ ಯಾವ ಬೆಟ್ಟ ಗುಡ್ಡಗಳು ಇಲ್ಲದ್ದರಿಂದ ಯಾವ ಸುರಂಗ ಕೊರೆಯುವ ಕೆಲಸವಿಲ್ಲ. ಆದ್ದರಿಂದ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಈ ನಿಟ್ಟಿನಲ್ಲಿ ಮನಸ್ಸು ಮಾಡಬೇಕಾಗಿದೆ. ಇದರಿಂದಾಗಿ ಕೊಡಗಿನ ಜನರಿಗಲ್ಲದೆ ಹುಣಸೂರು ಹಾಗೂ ಪಿರಿಯಾಪಟ್ಟಣದ ಜನರಿಗೂ ಸಹಾಯವಾಗುವುದು.

ಕೊಡಗಿನ ಜನ ಕೃಷಿ, ಒಳ್ಳೆ ಮೆಣಸು ಬೆಳೆಗಳ ಕ್ರಯ ಕಡಿಮೆಯಾದುದರಿಂದ ಅವರ ಮುಂದಿನ ಭವಿಷ್ಯವನ್ನು ಈ ರೀತಿಯ ಹೊಸ ರೀತಿಯ ಸೌಕರ್ಯ ಅತೀ ಅವಶ್ಯಕವಾಗಿದೆ. ಇದರಿಂದಾಗಿ ವಸ್ತುಗಳ ವಹಿವಾಟಿಗೆ ಮಾತ್ರ ಸಹಾಯಕ ವಾಗುವುದಲ್ಲದೆ ಕೊಡಗಿನ ಕೈಗಾರಿಕಾ ಅಭಿವೃದ್ಧಿಗೆ ಸಹಾಯಕ ವಾಗಿ ಕೊಡಗಿನ ಜನ ಬರೇ ವ್ಯವಸಾಯದ ಉತ್ಪತ್ತಿಯನ್ನೇ ನಂಬಿಕೊಂಡಿರದೆ ಕೊಡಗು ಜಿಲ್ಲೆಯ ಕೈಗಾರಿಕಾ ಅಭಿವೃದ್ಧಿಗೆ ಸಹಾಯುವಾಗಬಹುದೆಂದು ಸಂಗಾತಿಯ ನಿಜವಾದ ಆಶಯವಾಗಿದೆ.

---

## ಕೊಡಗಿನ ಪ್ರಸ್ತಾವಿಕ ಹಿನ್ನಲೆ

ಕೊಡಗು ಬೆಟ್ಟಗುಡ್ಡಗಳಿಂದ ಕೂಡಿ ಸಸ್ಯ ಸಂಪತ್ಸಮೃದ್ಧಿಯನ್ನು ಒಳಗೊಂಡ ಸುಂದರ ಜಿಲ್ಲೆಯಾಗಿದೆ. ಪ್ರಕೃತಿ ದೇವಿಯ ಬೆಡಗು ಬಿನ್ನಾಣ, ಲಾಸ್ಯ ಲಾವಣ್ಯಗಳಿಗೆ ಇದು ದೇಶವಿದೇಶಗಳಲ್ಲಿ ಪ್ರಸಿದ್ಧಿಯನ್ನು ಪಡೆದಿದೆ. ವಿಸ್ತಾರವಾದ ಭಾರತ ದೇಶದಲ್ಲಿ ಕೊಡಗಿನ ಭೌಗೋಳಿಕ ಸ್ಥಾನ ಕಿರಿದು. ಹಾಗಿದ್ದರೂ ಕೂಡ ಕೊಡಗಿನ ಕೀರ್ತಿಯಲ್ಲಿ ಕೊಡಗಿನ ಸ್ಥಾನ ಹಿರಿದು. ಅದಕ್ಕೆ ಕಾರಣ ಮುಖ್ಯವಾಗಿ ಅದರ ಮನಮೋಹಕ ವಾದ ಪ್ರಾಕೃತಿಕ ಸೌಂದರ್ಯ, ಸಮೃದ್ಧ ಆರ್ಥಿಕ ಸಂಪನ್ಮೂಲಗಳು, ಭಾರತದ ಪ್ರಸಿದ್ಧವಾದ ಪುಣ್ಯ ನದಿಗಳಲ್ಲಿ ಒಂದಾದ ಕಾವೇರಿ ನದಿಯ ಉಗಮ ಸ್ಥಾನ ಹಾಗೂ ತೀರ್ಥಕ್ಷೇತ್ರಗಳು ಇಲ್ಲಿರುವುದು ಮತ್ತು ಕೊಡಗಿನ ಪ್ರಧಾನ ನಿವಾಸಿಗಳ ವಿಶಿಷ್ಟ ಜೀವನ ವಿಧಾನ ಹೊಂದಿರುವ ಕೊಡಗರು, ಕೊಡಗಿನ ಮನೋಹರವಾದ ಪ್ರಕೃತಿ ಸೌಂದರ್ಯಕ್ಕೆ ಆಕರ್ಷತರಾಗಿ ದೇಶ ವಿದೇಶ ಮಹನೀಯರುಗಳು ಈ ಸುಂದರ ಜಿಲ್ಲೆಗೆ ಭೇಟಿ ನೀಡಿ ಅದರ ಸೊಬಗನ್ನು ಮನಸೋಕ್ತ ಬಣ್ಣಿಸಿದ್ದಾರೆ. ಕೊಡಗಿನಲ್ಲಿ ಕೊಡಗರಲ್ಲದೆ ಗೌಡರು, ಹರಿಜನರು, ಗಿರಿಜನರು ಇತರರು ಅನೋನ್ಯತೆಯಿಂದ ಬಾಳುತ್ತಿದ್ದಾರೆ. ಇವರೆಲ್ಲರಿಂದ ಕೊಡಗು ಸಮೃದ್ಧಿಯಾಗಿದೆ. ಹಸನಾದ ಬದುಕನ್ನು ಸಾಗಿಸುತ್ತಿದ್ದಾರೆ. ಚಿಕ್ಕ ಪುಟ್ಟ ಭಿನ್ನಾಭಿ ಪ್ರಾಯಗಳಿಲ್ಲದಿದ್ದರೂ ಒಟ್ಟಿನಲ್ಲಿ ಶಾಂತಿ ಪ್ರಿಯರು.

ಹಸಿರು ಗುಡ್ಡ ಬೆಟ್ಟಗಳ ನಡುವಿನ ಕಣಿವೆಗಳಲ್ಲಿರುವ ಬತ್ತದ ಗದ್ದೆಯ ಬಯಲುಗಳಿಗೂ, ಸಾಲು ಸಾಲಾಗಿ ಸರಣಿಗಳಂತೆ ತಲೆಯೆತ್ತಿರುವ ಪಶ್ಚಿಮ ಘಟ್ಟ ಬೆಟ್ಟ ಸಾಲುಗಳ ಉನ್ನತ ಬೆಟ್ಟಗಳೂ, ದಟ್ಟವಾದ ಅರಣ್ಯಗಳೂ, ಸುಂದರವಾದ ಕಾಫಿ, ಏಲಕ್ಕಿ ಮತ್ತು ಕಿತ್ತಳೆ ತೋಟಗಳು ಕೊಡಗಿನ ನೈಸರ್ಗಿಕ ವೈಶಿಷ್ಟ್ಯಗಳಾಗಿವೆ. ನಗರಗಳಲ್ಲಿನ ಯಾಂತ್ರಿಕ ಜೀವನ, ಜನ ಜಂಗುಳಿಯ ಗೌಜು ಗದ್ದಲಗಳಿಗೆ ಒಳಗಾದವರು ಒಂದು ಇಲ್ಲಿನ ಪರಿಶುದ್ಧವಾದ ತಂಪು ಕಟ್ಟಡ ಗಾಳಿ, ಪ್ರಕೃತಿ ಸೌಂದರ್ಯದ ಸುಖವನ್ನು ಅನುಭವಿಸುವಾಗ ಅವರಿಗೆ ವಿಶೇಷವಾದ ಆನಂದ ಮತ್ತು ಉತ್ಸಾಹಗಳು ಉಂಟಾಗುವುದರಲ್ಲಿ ಸಂದೇಹವಿಲ್ಲ. ಇನ್ನೂ ಕೂಡ ಆಧುನಿಕ ಸಂಚಾರ ವ್ಯವಸ್ಥೆಗಳಾದ ರೈಲು ಮತ್ತು ವಿಮಾನಗಳ ಬಳಕೆಯು ಕೊಡಗಿನಲ್ಲಿ ಇನ್ನೂ ಜಾರಿಗೆ ಬಂದಿರುವುದಿಲ್ಲ. ಆದರೆ ಕೊಡಗಿನಲ್ಲಿ ರಸ್ತೆಗಳ ಜಾಲ ವ್ಯಾಪಕವಾದುದು. ಕಾಫಿ, ಏಲಕ್ಕಿ, ಕಿತ್ತಳೆ, ಮೆಣಸು, ಜೇನು ಎಲ್ಲವೂ ಪ್ರಸಿದ್ಧ ಉತ್ಪನ್ನಗಳು. ಆದರೆ ಇತ್ತೀಚೆಗೆ ಕಾಫಿಯ ಬೆಲೆ ಕುಸಿದಿದೆ. ಏಲಕ್ಕಿ, ಕಿತ್ತಳೆ, ಅಪರೂಪವಾಗಿರುವುದು ದುರಂತವಾಗಿದೆ. ಜೇನು ಅಪರೂಪವಾದರೂ ಗುಣಮಟ್ಟವನ್ನು ಜನಪ್ರಿಯತೆಯನ್ನು ಕಳಕೊಂಡಿಲ್ಲ. ಕಾಶ್ಮೀರ, ಹಿಮಾಲಯ ಪರ್ವತ ಪ್ರದೇಶಗಳ ಜೇನಿನಂತೆ ವಿಶಿಷ್ಟ ಔಷಧೀಯ ಗುಣಗಳನ್ನು ಹೊಂದಿ ಕೊಡಗಿನ ಜೇನು ಪ್ರಖ್ಯಾತಿಗಳಿಸಿದೆ. ಅರಣ್ಯಗಳು ಮತ್ತು ತೋಟಗಳು ಜಿಲ್ಲೆಯ ಆರ್ಥಿಕ ಬೆಳವಣಿಗೆಗೆ ಆಧಾರ ಸ್ತಂಭಗಳಾಗಿವೆ. ಖನಿಜ ಸಂಪತ್ತು ಮತ್ತು ಕೈಗಾರಿಕೆಗಳ ಅಭಿವೃದ್ಧಿಯಲ್ಲಿ ರಾಜ್ಯದಲ್ಲಿ ಜಿಲ್ಲೆಯದು ಕೊನೆಯ ಸ್ಥಾನ ಜಿಲ್ಲೆಯ ಸಂಪೂರ್ಣವಾಗಿ ಭೂಮ್ಯಾವೃತವಾಗಿದ್ದು ಸಾಗರದ ಸಂಪರ್ಕ ಇಲ್ಲದಿರುವುದಿಲ್ಲ. ಸಾಗರ ಮತ್ಸ್ಯ ಪಾಲನೆಗೆ ಇಲ್ಲಿ ಅವಕಾಶವಿಲ್ಲ. ಒಳನಾಡು ಮತ್ಸ್ಯ ಪಾಲನೆಗೂ ಹೆಚ್ಚು ಜಲಸಂಪ ನ್ಮೂಲಗಳಿಲ್ಲ. ಪಶುಪಾಲನೆ, ವ್ಯಾಪಾರ ಮತ್ತು ವಾಣಿಜ್ಯೋ ದ್ಯಮ ರಂಗಗಳಲ್ಲಿ ಸ್ವಲ್ಪ ಅಭಿವೃದ್ಧಿಯನ್ನು ಕಾಣಬಹುದು. ಕರ್ನಾಟಕದಲ್ಲಿ ಬಾಚಿರುವ ಸಹ್ಯಾದ್ರಿಯ ದಕ್ಷಿಣ ತುದಿಯಲ್ಲಿರುವ ರಾಜ್ಯದ ಗಡಿಭಾಗದ ಕೊಡಗು ಜಿಲ್ಲೆಯು ಐತಿಹಾಸಿಕವಾಗಿ ಸಾಂಸ್ಕೃತಿಕವಾಗಿ ತನ್ನ ವೈಶಿಷ್ಟ್ಯವನ್ನು ಉಳಿಸಿಕೊಂಡಿರುವುದು ಸಂತಸ.

(ಮುಂದಿನ ಸಂಚಿಕೆಯಲ್ಲಿ ಹೆಸರಿನ ಮೂಲ)- ಸಂಗಾತಿ

---

ಇಬ್ಬರ ಜಗಳದಲ್ಲಿ ಮೂರನೆಯವನಿಗೆ ಜಯವಾಗುತ್ತದೆ. ಅದನ್ನರಿತು ಕ್ರಿಯಾಶೀಲಾರಾಗುವುದು ಬುದ್ಧಿವಂತರ ಲಕ್ಷಣ

# ಕೊಡಗಿನಲ್ಲಿ ಮಹಿಳೆಯರ ಪ್ರಮಾಣ ಗಣನೀಯ ಏರಿಕೆ

ಕರ್ನಾಟಕವೂ ಸೇರಿದಂತೆ ದೇಶದಲ್ಲಿ ಮಹಿಳೆಯರ ಅನುಪಾತದಲ್ಲಿ ಭಾರೀ ವ್ಯತ್ಯಾಸಗಳಿದ್ದರೂ, ಕೊಡಗು ಜಿಲ್ಲೆಯಲ್ಲಿ ಮಹಿಳೆಯರ ಪ್ರಮಾಣದಲ್ಲಿ ಗಣನೀಯವಾದ ಏರಿಕೆಯಾಗಿರುವುದು ಬೆಳಕಿಗೆ ಬಂದಿದೆ.

೧೯೮೧ರ ಜನಗಣತಿ ಪ್ರಕಾರ ಕೊಡಗು ಜಿಲ್ಲೆಯಲ್ಲಿ ಪ್ರತೀ ಸಾವಿರ ಪುರುಷರಿಗೆ ೯೩೩ ಮಹಿಳೆಯರಿದ್ದರು. ೧೯೯೧ರಲ್ಲಿ ಈ ಪ್ರಮಾಣ ೯೭೯ ಕ್ಕೆ ಏರಿದರೆ ೨೦೦೧ರ ಗಣತಿಯ ಪ್ರಕಾರ ಪ್ರತೀ ಸಾವಿರ ಪುರುಷರಿಗೆ ೯೯೬ ಮಂದಿ ಮಹಿಳೆಯರಿರುವುದು ಕಂಡು ಬಂದಿದೆ. ಈ ಪ್ರಮಾಣದಲ್ಲಿ ಕೇವಲ ಐದು ಏರಿಕೆಯಾದಲ್ಲಿ ಪುರುಷರ ಪ್ರಮಾಣವನ್ನು ಸರಿಗಟ್ಟಲಿದ್ದಾರೆ.

ಜಿಲ್ಲಾ ಆರೋಗ್ಯ ಇಲಾಖೆ ನಡೆಸಿದ ಸಮೀಕ್ಷೆಯ ಪ್ರಕಾರ ಕೊಡಗು ಜಿಲ್ಲೆಯಲ್ಲಿ ಶೈಕ್ಷಣಿಕ ಮಟ್ಟ ಹೆಚ್ಚಿಸುವುದು, ಆರೋಗ್ಯದಲ್ಲಿನ ಸುಧಾರಣೆ, ಹೆಣ್ಣು ಭ್ರೂಣ ಹತ್ಯೆ ಯಂತಹ ಪ್ರಕರಣಗಳು ಕಡಿಮೆಯಾಗಿರುವುದು ಮಹಿಳೆಯರ ಅನುಪಾತ ಹೆಚ್ಚಲು ಕಾರಣವಾಗಿದೆ ಎಂದು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ ಡಾ. ವಿಶ್ವನಾಥಕುಮಾರ್ ಇತ್ತೀಚೆಗೆ ತಿಳಿಸಿದ್ದಾರೆ. ೨೦೦೧ರ ಜನಗಣತಿ ಪ್ರಕಾರ ಕೊಡಗಿನಲ್ಲಿ ಒಟ್ಟು ೫,೪೫,೨೨೨ ಜನಸಂಖ್ಯೆಯಿದ್ದು ಈ ಪೈಕಿ ೨,೭೩,೨೧೦ ಮಂದಿ ಪುರುಷರ ಹಾಗೂ ೨, ೭೨,೧೧೨ ಮಂದಿ ಮಹಿಳೆಯರಿದ್ದಾರೆ. ಜಿಲ್ಲೆಯಲ್ಲಿ ೭೮.೧೭ ಮಂದಿ ಅಕ್ಷರಸ್ಥರಾಗಿದ್ದು ಈ ಪೈಕಿ ಪುರುಷರು ಪ್ರಮಾಣ ಶೇ. ೮೩.೮೦ ಆದರೆ ಮಹಿಳೆಯರ ಪ್ರಮಾಣ ಶೇ. ೭೫.೫೩ ರಷ್ಟಿದೆ ಎಂದು ಹೇಳಲಾಗಿದೆ.

ಜಿಲ್ಲೆಯಲ್ಲಿ ಜನನ ಪ್ರಮಾಣ ೧೭ ರಷ್ಟಿದ್ದರೆ, ಸಾವಿನ ಪ್ರಮಾಣ ೪.೧೯ರಷ್ಟು ಮಾತ್ರ, ಮಕ್ಕಳ ಸಾವಿನ ಪ್ರಮಾಣ ೧೯.೫ ರಷ್ಟಿದ್ದರೆ ತಾಯಿಯ ಗರ್ಭದಲ್ಲಿ ಸಾಯುವ ಮಕ್ಕಳ ಪ್ರಮಾಣ ಕೇವಲ ೧.೧೫ ಮಾತ್ರ. ಎಂದು ಸಮೀಕ್ಷೆ ತಿಳಿಸಿದೆ. ಆದರೆ ರಾಜ್ಯದಲ್ಲಿ ಜನನ ಪ್ರಮಾಣ ಪ್ರತೀ ಸಾವಿರ ಮಂದಿಗೆ ೨೨.೭ ಇದ್ದರೆ, ಸಾವಿನ ಪ್ರಮಾಣ ೭.೬, ಮಕ್ಕಳ ಸಾವಿನ ಪ್ರಮಾಣ ಪ್ರತೀ ಸಾವಿರಕ್ಕೆ ೫೧ ಇದೆ. ಗರ್ಭಾವಸ್ಥೆಯಲ್ಲೇ ಸಾಯುವ ಮಕ್ಕಳ ಪ್ರಮಾಣ ಕೇವಲ ೪ ಎಂದು ಸಮೀಕ್ಷೆ ಹೇಳಿದೆ.

ಆರೋಗ್ಯ ಸುಧಾರಣೆ ಕಾರ್ಯಕ್ರಮದಡಿ ಕೊಡಗು ಜಿಲ್ಲೆಯಲ್ಲಿ ಗಣನೀಯ ಸಾಧನೆಯಾಗಿದ್ದು, ಈ ಹಿನ್ನಲೆಯಲ್ಲಿ ಕಳೆದ ಸಾಲಿನಲ್ಲಿ ಜಿಲ್ಲಾ ಆರೋಗ್ಯ ಅಧಿಕಾರಿಯವರಿಗೆ ಸರ್ಕಾರ ವೈದ್ಯಶ್ರೀ ಪ್ರಶಸ್ತಿ ನೀಡಿ ಗೌರವಿಸಿದೆ.

ಜಿಲ್ಲೆಯಲ್ಲಿ ಒಟ್ಟು ೨೬ ಪ್ರಾಥಮಿಕ ಆರೋಗ್ಯ ಕೇಂದ್ರ ೬ ಸಮುದಾಯ ಆರೋಗ್ಯ ಕೇಂದ್ರ ಮೂರು ಪ್ರಾಥಮಿಕ ಆರೋಗ್ಯ ಘಟಕ ಹಾಗೂ ಗಿರಿಜನರ ಅನುಕೂಲಕ್ಕಾಗಿ ಕಲ್ಲಳ್ಳ ಹಾಗೂ ಬಸವನ ಹಳ್ಳಿಯಲ್ಲಿ ತಲಾ ಒಂದು ಸಂಚಾರ ಆರೋಗ್ಯ ಘಟಕಗಳಿವೆ. ಈಗ ನಾಪೋಕ್ಲು ಸಮುದಾಯ ಆರೋಗ್ಯ ಕೇಂದ್ರವನ್ನು ಮೇಲ್ದರ್ಜೆಗೆ ಏರಿಸಲಾಗುತ್ತಿದ್ದು, ಸೋಮವಾರ ಪೇಟೆ ತಾಲ್ಲೂಕಿನ ಬಿಳಿಗೇರಿಯಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರ ಸ್ಥಾಪಿಸಲು ಸರ್ಕಾರ ಮಂಜೂರಾತಿ ನೀಡಿದೆ. ಅಲ್ಲದೆ ೨೧ ಲಕ್ಷ ರೂ. ಗಳನ್ನು ಈಗಾಗಲೇ ಬಿಡುಗಡೆ ಮಾಡಲಾಗಿದ್ದು, ಸಧ್ಯದಲ್ಲೇ ಕಾಮಗಾರಿ ಆರಂಭವಾಗಲಿದೆ. ಮಲ್ದಾರೆ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕಾಗಿ ಬಿಬಿಟಿಸಿಯಿಂದ ಒಂದು ಏಕರೆ ಜಾಗವನ್ನು ಪಡೆಯಲಾಗುತ್ತಿದ್ದು, ಇದರೊಂದಿಗೆ ಎಲ್ಲಾ ಪ್ರಾಥಮಿಕ ಹಾಗೂ ಸಮುದಾಯ ಆರೋಗ್ಯಗಳಿಗೆ ಸ್ವಂತ ಕಟ್ಟಡವಿರುವ ಏಕೈಕ ಜಿಲ್ಲೆ ಎಂಬ ಹೆಗ್ಗಳಿಕೆಗೂ ಕೊಡಗು ಜಿಲ್ಲೆ ಪಾತ್ರವಾಗಿದೆ ಎಂದು ಆರೋಗ್ಯಾಧಿಕಾರಿ ಡಾ. ವಿಶ್ವನಾಥಕುಮಾರ್ ಇತ್ತೀಚೆಗೆ ತಿಳಿಸಿದ್ದಾರೆ.

ಜಿಲ್ಲೆಯಲ್ಲಿ ಒಟ್ಟು ೮೩ ಮಂದಿ ವೈದ್ಯರ ಹುದ್ದೆ ಮಂಜೂರಾಗಿದ್ದು, ಈ ಪೈಕಿ ೨೩ ಮಂದಿ ಖಾಯಂ ಹಾಗೂ ೩೭ ಮಂದಿ ಗುತ್ತಿಗೆ ಆಧಾರದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಇನ್ನು ೨೩ ವೈದ್ಯರ ಕೊರತೆಯಿದೆ. ಅಲ್ಲದೆ ೯ ಮಂದಿ ಎಎನ್‌ಎಂ ೭೨ ಮಂದಿ ಪುರುಷ ಆರೋಗ್ಯ ಸಹಾಯಕರು, ೩೪ ಮಂದಿ ಫಾರ್ಮಸಿಸ್ಟ್ ಮತ್ತು ೩೮ ಮಂದಿ ಗುಮಾಸ್ತರ ಹುದ್ದೆಗಳು ಖಾಲಿ ಇವೆ ಎಂದು ವಿವರಿಸಿರುವ ಅವರು, ಇದರೊಂದಿಗೆ ತಜ್ಞ ವೈದ್ಯರ ಕೊರತೆ ಇದೆ ಎಂದು ಹೇಳಿದ್ದಾರೆ.

-ಸಂಗಾತಿ

 **ಶುಭ ವಿವಾಹ** 

ಭಾಗಮಂಡಲ ನಾಡು ಚೆರಂಡೇಟಿ ಗ್ರಾಮದ ಚೆರುಕನ ದಿವಂಗತ ಮುತ್ತಪ್ಪನವರ ಮಗ ಲವಕುಮಾರನಿಗೂ ಮತ್ತು ಸೋಮವಾರಪೇಟೆ ತಾಲೂಕಿನ ಆಲೂರು ಸಿದ್ಧಾಪುರ ಗ್ರಾಮದ ದೇವಾಯಿರ ಗ್ರಾಮದ ದಿ. ಮೋಟಯ್ಯನವರ ಪುತ್ರಿ ಸಾವಿತ್ರಿ ಎಂಬ ವಧುವಿಗೂ ದಿನಾಂಕ 13-4-04 ರ ಮಂಗಳವಾರ ಭಾಗಮಂಡಲ ಗೌಡ ಸಮಾಜದಲ್ಲಿ ಪದ್ಧತಿಯಂತೆ ವಿಜೃಂಭಣೆಯಿಂದ ನಡೆಯಿತು.

ಮೈಸೂರು ನಿವಾಸಿ ಅಚ್ಚಪಟ್ಟೀರ ಗಣೇಶ್‌ರವರ ಮೂರನೇ ಮಗಳು ಚಂದ್ರಪ್ರಭಳಿಗೂ ರಾಯಚೂರು ಜಿಲ್ಲೆಯ ಶ್ರೀಮತಿ ಶ್ರೀ ಸುಧಾ ಮತ್ತು ಉಮಾಪತಿ ಸಾಹುಕಾರ್‌ರವರ ಮಗ ಪ್ರವೀಣ್ ಕುಮಾರ್ ಸಾಹುಕಾರ್ ನವರ ಮದುವೆಯ ಆರತಕ್ಷತೆಯು ದಿನಾಂಕ 18-4-04 ರಂದು ಮೈಸೂರಿನ ರಾಘುವೇಂದ್ರ ಕಲ್ಯಾಣ ಮಂಟಪದಲ್ಲಿ ಶೋಭಾಯ ಮಾನವಾಗಿ ನಡೆಯಿತು.

ದೆಹಲಿ ನಿವಾಸಿ ಮೂಟೇರ ಮುದ್ದಪ್ಪನವರ ಮಗ ವಿವೇಕಾನಂದನಿಗೂ ಮಡಿಕೇರಿ ನಿವಾಸಿ ತಳೂರು ಆನಂದನವರ ಮಗಳು ರಮ್ಯಳಿಗೂ ದಿನಾಂಕ 23-4-04 ರಂದು ಮಡಿಕೇರಿ ಯಲ್ಲಿರುವ ಕೆಳಗಿನ ಗೌಡ ಸಮುದಾಯ ಭವನದಲ್ಲಿ ಭಾರಿ ಅದ್ದೂರಿಯಾಗಿ ನಡೆಯಿತು.

ಮೈಸೂರು ನಿವಾಸಿ ಮೊಟ್ಟನ ಜೋಯಪ್ಪನವರ ಮಗಳು ನಾಗಲಕ್ಷ್ಮಿ ಎಂಬ ವಧುವಿಗೂ ಮತ್ತು ಪಿರಿಯಾಪಟ್ಟಣ ತಾಲ್ಲೂಕು ಶ್ರೀ ಪಾಣತ್ತಲೆ ತಿಮ್ಮಯ್ಯನವರ ಮಗ ಸೋಮಯ್ಯನವರಿಗೂ ದಿನಾಂಕ 29-4-04 ರ ಗುರುವಾರ ಕುಶಾಲನಗರ ಗೌಡ ಸಮಾಜದಲ್ಲಿ ಸಾಂಗವಾಗಿ ನಡೆಯಿತು.

ಉತ್ತಮ ಗುರಿಗಾಗಿ ತನ್ನ ಪ್ರಾಣವನ್ನು ತೆರುವವನು ಎಂದಿಗೂ ಸೋತವರಾಗುವುದಿಲ್ಲ.

## ವೀರಾಜಪೇಟೆ ತಾಲ್ಲೂಕಿನ ಗೌಡ ಜನಾಂಗದ ಬಹು ದಿನಗಳ ಕನಸು ನನಸು. ಕೊಡಗಿನ ವೀರಾಜಪೇಟೆಯಲ್ಲಿ ಶ್ರೀಮತಿ ಕುರುಂಜಿ ಜಾನಕಿ ವೆಂಕಟ್ರಮಣಗೌಡ ಸಮುದಾಯ ಭವನ.

ವೀರಾಜಪೇಟೆಯ ಬೋಯಿಕೇರಿಯಲ್ಲಿ ಶ್ರೀಮತಿ ಕುರುಂಜಿ ಜಾನಕಿ ವೆಂಕಟ್ರಮಣ ಗೌಡ ಸಮುದಾಯ ಭವನದ ಉದ್ಘಾಟನಾ ಸಮಾರೋಪ ಸಮಾರಂಭವು ದಿನಾಂಕ 14-4-2004 ರಂದು ವೀರಾಜಪೇಟೆ ತಾಲ್ಲೂಕಿನ ಗೌಡ ಸಮುದಾಯಕ್ಕೂ ಹಾಗೂ ಕೊಡಗು ನಾಡಿಗೂ ಅರ್ಪಿಸಲ್ಪಟ್ಟಿತು. ಸಮುದಾಯ ಭವನವನ್ನು ಕೊಡುಗೈ ದಾನಿ,ಗೌಡ ಜನಾಂಗದ ಕಣ್ಮಣಿ ಅವತಾರ ಪುರುಷ ಶ್ರೀ ಕುರುಂಜಿ ವೆಂಕಟ್ರಮಣ ಗೌಡರು ಜನಾಂಗದ ಉದ್ಧಾರ, ಲೋಕ ಕಲ್ಯಾಣಕ್ಕಾಗಿ ನೀಡಿ, ಉದ್ಘಾಟಿಸಿ ಜನಾಂಗಕ್ಕೂ, ನಾಡಿಗೂ ಸಮರ್ಪಿಸಿದರು.

ಕರ್ನಾಟಕದ ಕಾಶ್ಮೀರವೆಂದೆ ಪ್ರಸಿದ್ಧ ಪಡೆದ ಕೊಡಗು ಜಿಲ್ಲೆಯ ದಕ್ಷಿಣ ಭಾಗಕ್ಕಿರುವ ಸುಂದರ ಬಯಲು ಪ್ರದೇಶ ವೀರಾಜಪೇಟೆ. ಕೊಡಗು ರಾಜರ ಕಾಲದಲ್ಲಿ ವೀರರಾಜೇಂದ್ರ ಪೇಟೆಯೆಂದೇ ಕರೆಯಲ್ಪಡುತ್ತಿದ್ದು ಈಗ ಇತಿಹಾಸವಾಗಿದೆ. ಇದು ಜಿಲ್ಲೆಯ ದೊಡ್ಡ ತಾಲ್ಲೂಕು ಹಾಗೂ 96 ಗ್ರಾಮಗಳನ್ನು ಹೊಂದಿದೆ. ಇಲ್ಲಿ ವಿವಿಧ ಜನಾಂಗಗಳು ಸೌಹಾರ್ದತೆಯಿಂದ ಬಾಳುತ್ತಿದ್ದು ಹಾಗೂ ಗೌಡರು ವಿರಳವಾಗಿಯೂ ಹರಡಿದರೂ ಕೆಲವು ಗ್ರಾಮಗಳಲ್ಲಿ ಸಾಕಷ್ಟು ಇದ್ದಾರೆ. ತಾಲ್ಲೂಕಿನ ಕೆದ ಮುಳ್ಳೂರು, ಮಾಲ್ದಾರೆ, ಕಡಿಯತ್ ನಾಡ್, ಕೈಕೇರಿ, ಕಳತ್‌ಮಾಡ್, ಗೋಣಿಕೊಪ್ಪ, ಸಿದ್ದಾಪುರ, ಕರಡಿಗೋಡು, ತಿತಿಮತಿ, ಅಮ್ಮತಿ, ಪಾಲಿಬೆಟ್ಟ, ಗ್ರಾಮಗಳಲ್ಲಿ ಸಾಕಷ್ಟು ಜನರಿರುವುದು ಗೋಚರಿಸುತ್ತದೆ. ಇಂತಹ ಗೌಡ ಜನಾಂಗದ ಹತ್ತು ಕುಟುಂಬ ಹದಿನೆಂಟು ಗೋತ್ರಕ್ಕೆ ಸೇರಿದ ಬಂದುಗಳಿಗೆಲ್ಲಾ ತಮ್ಮದೇ ಆದ ಗೌಡ ನೆಲೆಯ ಅವಶ್ಯಕತೆ ಮತ್ತು ಅನಿವಾರ್ಯವೂ ಇತ್ತು. ಈ ತಾಲೂಕಿನಲ್ಲಿ ಇದೇ ಪ್ರಪ್ರಥಮ ಗೌಡ ಸಮುದಾಯಭವನವಾಗಿದೆ. ವೀರಾಜಪೇಟೆ ತಾಲೂಕಿನ ಸಮುದಾಯ ಭವನದ ಈ ಅನಿವಾರ್ಯತೆಯ ಕೊರತೆಯನ್ನು ಈ ಮೇಲಿನ ಸುಂದರ ಸಮುದಾಯ ಭವನವು ನೀಗಿಸಿದೆಯೆಂದರೆ ಅತಿಶಯೋಕ್ತಿಯಲ್ಲ.

ದಿನಾಂಕ 14-4-2004 ರಲ್ಲಿ ವೀರಾಜಪೇಟೆಯಿಂದ 2K.M. ದೂರದಲ್ಲಿರುವ ಬೋಯಿಕೇರಿಯ ಗೌಡ ಸಮಾಜದ ಆಶ್ರಿತದಲ್ಲಿರುವ ಶ್ರೀಮತಿ ಕುರುಂಜಿ ಜಾನಕಿ ವೆಂಕಟ್ರಮಣ ಗೌಡ ಸಮುದಾಯ ಭವನವು ಸುಂದರವಾಗಿ ಅಲಂಕೃತ ಗೊಂಡಿತ್ತು. ಸುಮಾರು 3/4 ಏಕ್ರೆ ಸ್ಥಳವನ್ನು ಹೊಂದಿದ ಈ ಸುಂದರ ಸಮುದಾಯ ಭವನವು, ಮಹಡಿಯನ್ನು ಹೊಂದಿದು ಎಲ್ಲಾ ಅನುಕೂಲತೆಯ ಸೌಲಭ್ಯವುಳ್ಳದಾಗಿದೆ. ಕಲ್ಯಾಣ ಮಂಟಪದ ಹಾಲ್ ಅಲ್ಲದೆ, ಅದಕ್ಕೆ ಲಗತ್ತಿಸಿದಂತೆ ವಿಶಾಲವಾದ ಭೋಜನ ಶಾಲೆಯನ್ನು ವೇದಿಕೆಯನ್ನು ಹೊಂದಿ ಮುಖ ಮಂಟಪವು ಸಾಕಷ್ಟು ಎತ್ತರದಲ್ಲಿದ್ದು ನೋಡುಗರ ಮನಸ್ಸಿಗೆ ಉಲ್ಲಾಸವನ್ನು ಸಂತಸವನ್ನು ನೀಡುತ್ತದೆ. ಕಟ್ಟಡದ ಹಿಂದೆ ಹಲವು ಕಲ್ಪವೃಕ್ಷಗಳಿದ್ದು, ವೀರಾಜಪೇಟೆಯ ಸನಿಹದ ಎಲ್ಲಾ ಪಕ್ಷಿಗಳಿಗೂ, ಬಿಳಿಕೊಕ್ಕರೆಗಳಿಗೂ ಬೀಡಾಗಿರುವ ಪ್ರಶಾಂತ ತಾಣವಾಗಿದೆ. ಇಂತಹ ಸುಂದರವಾದ ಪ್ರದೇಶವು ತನ್ನ ವೈಭವದೊಂದಿಗೆ ಗೌಡವತಿಯರ ತುಂಬಿದ ಕಳಸ ತೋರಣಗಳಿಂದ ಅಲಂಕೃತಗೊಂಡು ಅಂದಿನ ಮುಖ್ಯ ಅತಿಥಿಗಳು, ದಾನಿಗಳು ಆದ ಡಾ. ಕುರುಂಜಿ ವೆಂಕಟ್ರಮಣ ಗೌಡರ ಬರುವಿಕೆಯನ್ನು ಸ್ವಾಗತಿಸಲು ಸಜ್ಜುಗೊಂಡಿತು. ಸುಮಾರು 100 ಮೀಟರಿನಷ್ಟು ದೂರದಿಂದ ರಸ್ತೆಯ ಇಕ್ಕೆಲಗಳಲ್ಲಿ ಕಳಸ ಹಿಡಿದು ನಿಂತ ಗೌಡವತಿಯವರ ಸ್ವಾಗತ ಮನಮೋಹಕ ದೃಷ್ಯವಾಗಿತ್ತು. ಬೆಳಿಗ್ಗೆ 10-35 ಕ್ಕೆ ಸರಿಯಾಗಿ ಆಗಮಿಸಿದ ಡಾ. ಕುರುಂಜಿಯವರೊಡನೆ ಅಂದಿನ ಇತರ ಮುಖ್ಯ ಗಣ್ಯ ವ್ಯಕ್ತಿಗಳನ್ನು ಗೌಡ ನೀರೆಯರು ಸಾಂಪ್ರದಾಯಿಕವಾಗಿ ಒಡ್ಡೋಲಗದ ಮೂಲಕ ಕರೆ ತಂದಾಗ, ರಸ್ತೆಯ ಇಬ್ಬದಿಗಳಲ್ಲಿ ನಿಂತ ಕುಲಬಾಂಧವರಿಗೆ ಶ್ರೀ ಕುರುಂಜಿಯವರು ಹಸ್ತಲಾಘವ ನೀಡುತ್ತಾ, ನಮಸ್ಕಾರ ಹೇಳುತ್ತಾ ಸಾಗಿ ಬಂದ ಪರಿ, ಸಮಾಜದ ಮುಖ್ಯ ದ್ವಾರದಲ್ಲಿ ರಿಬ್ಬನ್ ಕತ್ತರಿಸುವ ಮೂಲಕ ಉದ್ಘಾಟಿಸಿ ಸಭಾ ವೇದಿಕೆಗೆ ಕುರುಂಜಿಯುವರನ್ನು ಅತಿಥಿಗಳನ್ನು ಬಾಂದವರನ್ನು ಅದ್ದೂರಿಯಾಗಿ ಬರಮಾಡಿಕೊಳ್ಳಲಾಯಿತು.

ಬೆಳಿಗ್ಗೆ 11-00 ಘಂಟೆಗೆ ಜ್ಯೋತಿ ಬೆಳಗುವುದರ ಮೂಲಕ ಪ್ರಾರಂಭವಾದ ಸಭೆಯ ಅಧ್ಯಕ್ಷತೆಯನ್ನು ಪಡಿಕಲ್ ಮಾದಪ್ಪನವರು ವಹಿಸಿದ್ದರು. ವೇದಿಕೆಯಲ್ಲಿ ಜನಾಂಗದ ಗಣ್ಯ ವ್ಯಕ್ತಿಗಳಾದ ತೋಟಂಬೈಲು ನಾಣಯ್ಯನವರು, ದಂಬೆಕೋಡಿ ಚಿಣಪ್ಪನವರು, ಕುರುಂಜಿ ವೆಂಕಟ್ರಮಣ ಗೌಡರು, ಕೊಂಬಾರನ ಬೋಪಯ್ಯನವರು, ದಂಬೆಕೋಡಿ ಮಾದಪ್ಪನವರು ಕುಯ್ಯುಮುಡಿ ಪೂರ್ಣಯ್ಯನವರು, ತೋಟಂಬೈಲು ಪ್ರಭಾಕರ ನವರು, ತುಂತಜೆ ಗಣೇಶ್‌ನವರು, ಹೊಸೂರು ರಮೇಶ್‌ನವರು, ಪೈಕೇರ ಅನಂತ್‌ರಾಮ್‌ನವರು, ಚಿಯಂಡಿರ ರಾಧ ಯಾದವನ ವರು, ಪಾಣತ್ತಲೆ ತಮ್ಮಯ್ಯನವರು, ಕೋರನ ಪೂಣಚ್ಚನವರು, ಬಿಟ್ಟೀರ ರಾಮಯ್ಯನವರು, ಪುಳಕಂಡ್ರ ಮುತ್ತಪ್ಪನವರು, ದೇವಜನ ಧನಂಜಯನವರು, ದಂಬೆಕೋಡಿ ಆನಂದರವರು ಅಮೆ ಶಿವರಾಯ್‌ನವರು, ಪಟ್ಟಡ ಪ್ರಭಾಕರರವರು, ನೀರಬಿದರೆ ರಾಮಚಂದ್ರನವರು, ಕಲ್ಲುಗುಂಡಿ ಬೈಲೆ ಲೋಕಯ್ಯನವರು ಪೆರ್‌ಬಾಯಿ ಚಿಣಪ್ಪನವರು, ದಂಬೆಕೋಡಿ ಹರೀಶ್‌ನವರು ಪೊಕ್ಕುಲಂಡ ಸುಬ್ಬಯ್ಯನವರು ಆಸೀನರಾಗಿದ್ದರು.

ಸಭೆಯನ್ನು ಉದ್ದೇಶಿಸಿ ಹಲವಾರು ಗಣ್ಯ ವ್ಯಕ್ತಿಗಳು ತಮ್ಮ ಮನದಾಳದ ಆಂತರಿಕ ಸಂತಸವನ್ನು ವ್ಯಕ್ತ ಪಡಿಸುತ್ತಾ ಮಾತನಾಡಿದರು. ಈ ಸಂದರ್ಭದಲ್ಲಿ 15.5 ಲಕ್ಷದಷ್ಟು ನೀಡಿ ಸಮುದಾಯ ಭವನದ ಸ್ಥಾಪನೆಗೆ ಸಹಕರಿಸಿದ ಶ್ರೀ ಕುರುಂಜಿಯವರನ್ನು ಶಾಲುಹೊದಿಸಿ ಸನ್ಮಾನಿಸಲಾಯಿತು. ಗಣ್ಯ ಅತಿಥಿಗಳು ಆದ ಕುರುಂಜಿಯವರು ತಮ್ಮ ಎಂದಿನ ಶೈಲಿಯಲ್ಲಿ ಮಾತನಾಡಿ ಗೌಡ ಜನಾಂಗದ ಸಂಘಟನೆ, ಐಕ್ಯತೆಯನ್ನು ಧಾರ್ಮಿಕವಾಗಿಯೂ, ಶೈಕ್ಷಣಿಕವಾಗಿಯೂ, ಆರ್ಥಿಕವಾಗಿಯೂ ಆಧ್ಯಾತ್ಮಿಕವಾಗಿಯೂ, ರಾಜಕೀಯವಾಗಿಯೂ ಇದರನ್ನೆಲ್ಲದರ ಉಪಯೋಗ ಇಂದಿನ ಮತ್ತು ಮುಂದಿನ ಪೀಳಿಗೆಯವರು ಸದುಪಯೋಗ ಪಡಿಸಿಕೊಳ್ಳುವಂತೆ ಸಲಹೆ ನೀಡಿದರು. ಇಂದಿನ ಪ್ರಸ್ತುತ ರಾಜಕೀಯದಲ್ಲಿ ಸೂಕ್ಷ್ಮವಾಗಿ ಚಿಂತಿಸಿ, ಅವಲೋಕಿಸಿ ಮತ ನೀಡಬೇಕೆನ್ನುದನ್ನು ಶ್ರೀ ಕುರುಂಜಿಯವರು ನೆರೆದವರಿಗೆ ಬಹು ಸ್ವಾರಸ್ಯವಾಗಿ ಮಾರ್ಮಿಕವಾಗಿ ನುಡಿದರು. ಗೌಡ ಫೇಡರೇಶನ್ನಿನ ಪ್ರಥಮ ಅಧ್ಯಕ್ಷರಾದ ತೋಟಂಬೈಲು ನಾಣಯ್ಯನವರು ಮಾತನಾಡುತ್ತಾ ಜನಾಂಗ ಒಂದಾಗಿ, ಸಂಘಟಿತರಾಗಿ ಈ ಸರ್ತಿ ರಾಜಕೀಯ ಮುತ್ಸದ್ದಿತನ ತೋರಿಸುವಂತೆ ತಿಳಿಸಿದರು. ಇನ್ನೊಬ್ಬ ಅತಿಥಿ ಮೈಸೂರಿನ ಅಮೆ ಶಿವರಾಯ್ ಶೋಭಾನೆಗಳ ಬಗ್ಗೆ ಬಿಡಿ ಬಿಡಿ ಹಾಡುತ್ತಾ ಅವುಗಳ ಅರ್ಥವನ್ನು ಅವುಗಳ ಪಾವಿತ್ರ್ಯತೆಯನ್ನು ಗೌಡರು ನಡೆದು ಬಂದ ದಾರಿಯನ್ನು ಅದು ಸೂಚಿಸುವುದರಿಂದ ನಾವೆಲ್ಲ ಅದನ್ನು ಖಡ್ಡಾಯವಾಗಿ ಹಾಡಬೇಕೆಂದು ಸಮಾಜಕ್ಕೆ ಕರೆಯಿತ್ತರು. ಮಗದೊಬ್ಬ ಅತಿಥಿ ಗೌಡ ಸಾಂಸಕೃತಿಕ ಅಕಾಡೆಮಿ ಅಧ್ಯಕ್ಷರಾದ

---

ಗುರಿಯನ್ನು ತಲಪಬೇಕಾದರೆ ಧಗಧಗನೆ ಉರಿಯುವ ಜ್ವಾಲೆಯಂತಹ ಇಚ್ಚೆಯೊಂದಿಗೆ ದುಡಿಯಬೇಕು.

ತುಂತಜೆ ಗಣೇಶ್‌ನವರು ನಮ್ಮ ಹೆಂಗಳೆಯರು ವಿವಿಧ ರೀತಿಯ ತಾಳಿ ಜೈನುಗಳನ್ನು ಹಾಕಿಕೊಂಡು ಓಲಾಡುವುದು ಸರಿಯಲ್ಲ. ಈಗಿನ ಪದ್ಮಾವತಿ ತಾಳಿಯನ್ನು ಒಂದೇ ರೀತಿಯಲ್ಲಿ ಎಲ್ಲರು ಧರಿಸುವಂತಾಗಬೇಕೆಂದು ಆದೇಶ ನೀಡಿದರು.

ಸಮಾಜದ ಅಧ್ಯಕ್ಷ ಪಡಿಕಲ್ ಮಾದಪ್ಪನವರು ನೂತನ ಗೌಡ ಸಮಾಜ ಕಟ್ಟದಲ್ಲಿ ಇನ್ನು ಹಲವಾರು ಕೆಲಸ ಕಾರ್ಯಗಳು ಬಾಕಿ ಇದ್ದು ಆದಷ್ಟು ಬೇಗ ಪೂರ್ಣಗೊಳಿಸಲು ವೀರಾಜಪೇಟೆ ತಾಲ್ಲೂಕಿನ ಬಂದುಗಳನ್ನು ವಿನಂತಿಸಿಕೊಂಡರು. ಈ ಸಂಘಟನೆಗೆ ಸಹಕರಿಸಿದ ಸರ್ವರಿಗೂ ತಮ್ಮ ಮನದಾಳದ ಶುಭ ಹಾರೈಸಿದರು. ಹಾಗೂ ಮುಂದೆಯು ಸಹ ಹೀಗೆಯೇ ತಮ್ಮ ಸಹಕಾರ ನೀಡುತ್ತಾ ಒಟ್ಟಿನಲ್ಲಿ ಹೋದರೆ ಖಂಡಿತ ಸಾಧ್ಯವೆಂದರು.

ಸಭೆಯಲ್ಲಿ ನೂತನ ಸಮಾಜದ ವರದಿಯನ್ನು ಸಂಘಟನಾ ಕಾರ್ಯದರ್ಶಿ ಬಾರಿಕೆ ಮನೋಜ್ ಕುಮಾರ್ ವಾಚಿಸಿದರು. ಸಭಾ ಕಾರ್ಯಕ್ರಮವನ್ನು ಕಾರ್ಯದರ್ಶಿ ಮೂಡಗದ್ದೆ ರಾಮಕೃಷ್ಣನವರು ನೀಡಿದರೆ, ಗುಡ್ಡೆಮನೆ ರಮೇಶ್‌ರವರು ಕಾರ್ಯಕ್ರಮವನ್ನು ನಿರೂಪಿಸಿದರು. ಪ್ರಾರ್ಥನೆಯನ್ನು ಮೂಲೆಮನೆ ಪಾರ್ವತಿಯವರು ಮಾಡಿದರು. ಸ್ವಾಗತ, ಮತ್ತು ಸ್ವಾಗತ ಭಾಷಣವನ್ನುಮೂಡಗದ್ದೆ ರಾಮಕೃಷ್ಣನವರು ಮಾಡಿದರೆ ವಂದನಾರ್ಪಣೆಯನ್ನು ನಿವೃತ್ತ ಯೋಧ ಆರ್ಜಿ ಗ್ರಾಮದ ಚೆಟ್ಟಿನೆರವನ ಚಂದ್ರಶೇಖರ್ ಮಾಡಿದರು.

ನಿರೂಪಣೆಯಲ್ಲಿ ಗೌಡ ಸಮಾಜ ಸ್ಥಾಪಿಸಲು ಮುಖ್ಯ ಪ್ರೇರಕರಾದ ಶ್ರೀ ಪಟ್ಟಡ ಪ್ರಭಾಕರನವರನ್ನು, ಸಂಘಟಿಸಲು ಸಹಕರಿಸಿದ ಬಾರಿಕೆ ಮನೋಜ್ ಕುಮಾರ್‌ನವರನ್ನು, ಆರ್ಜಿ ಗ್ರಾಮದ ಪೆರುಂಬಾಡಿಯಲ್ಲಿ ಸಮಾಜಕ್ಕಾಗಿ 2 ಏಕ್ರೆ ಸ್ಥಳವನ್ನು ನೀಡಲು ಮುಂದೆ ಬಂದಿದ್ದ ಚೆಟ್ಟಿನೆರವನ ಬೋಜಮ್ಮನವರನ್ನು ಹಾಲಿ ಸಮಾಜಕ್ಕೆ ಸ್ಥಳ ನೀಡಿ ಸಹಕರಿಸಿದ ಶ್ರೀ ಮುಕ್ಕಾಟೀರ ಗಣಪತಿ ಮತ್ತು ಶ್ರೀಮತಿ ದೇವಮ್ಮಾಜಿಯವರನ್ನು, ಮತ್ತು ಸಮಾಜಕ್ಕೆ ಅಗತ್ಯವೆನಿಸಿದ ಧನದ ಅವಶ್ಯಕತೆ ಬಗ್ಗೆ ಸಲಹೆ ನೀಡಿದ ಖಜಾಂಚಿ ಪೊಕ್ಕುಲಂಡ ಸುಬ್ಬಯ್ಯನವರನ್ನು, ಅಂತೆಯೇ ಈ ಸಮುದಾಯ ಭವನಕ್ಕೆ ಬೇಕಾಗಿದ್ದ ಸುಮಾರು 20 ಲಕ್ಷದ ಮೊತ್ತವನ್ನು ಭರಿಸಲು ಹಗಲು ರಾತ್ರಿಯೆನ್ನದೆ ಶ್ರಮಿಸಿದ ಹಾಗೂ ಕುರುಂಜಿಯವರರಿಂದ ಸುಮಾರು 15.5 ಲಕ್ಷದ ಆರ್ಥಿಕ ನಿಧಿಯನ್ನು ತರುವಲ್ಲಿ ಸಾಕಷ್ಟು ಬೆವರು ಸುರಿಸಿದ ಕಾರ್ಯದರ್ಶಿ ಮುಡಗದ್ದೆ ರಾಮಕೃಷ್ಣ ಮತ್ತು ಅಧ್ಯಕ್ಷರಾದ ಪಡಿಕಲ್ ಮಾದಪ್ಪ, ನಿರ್ದೇಶಕರಾದ ಬಿಳಿಯನ ವಾಸು ಪೊಕ್ಕುಲಂಡ, ಸುಬ್ಬಯ್ಯ, ಪೊಕ್ಕುಲಂಡ ಪಾರ್ವತಿ, ಚೆಟ್ಟಿನೆರವನ ಬೋಜಮ್ಮ, ಬಾರಿಕೆ ಮನೋಜ್ ಕುಮಾರ್, ಮುಕ್ಕಾಟಿರ ಗಣಪತಿ, ಚಂಡೀರ ಸುಂದರ, ಗೌಡದಾರೆ ಬಿದ್ದಪ್ಪ, ತೆಕ್ಕಡ ರಮೇಶ್, ಚಂಡೀರ ದೇವರಾಜ್, ತೆಕ್ಕಡ ಗಣಪತಿ, ಮುಕ್ಕಾಟೀರ ಈರಪ್ಪ, ಪೆರ್ಬಾಯಿ ಪುಟ್ಟಸ್ವಾಮಿ, ತೆಕ್ಕಡ ರಮೇಶ್ ಇವರನ್ನು ನೆನಪಿಸಿ ಪ್ರಸಂಶಿಸಿ ಪ್ರಸ್ತಾಪಿಸಲಾಯಿತು. ಅಂದು ಬೆಳಿಗ್ಗೆ 8-30 ರ ಸುಮಾರಿಗೆ ಲೋಕ ಸಭಾ ಕ್ಷೇತ್ರದ ಆಕಾಂಕ್ಷಿ ಶ್ರೀ ದೇವರ ಗುಂಡ ಸದಾನಂದ ಗೌಡರು ಆಗಮಿಸಿ, ಶುಭ ಹಾರೈಸಿ ಚುನಾವಣಾ ತುರ್ತು ಕಾರ್ಯಕ್ರಮಕ್ಕೆ ತೆರಳಿದರು. ಶುಭ ಕೋರಿ ಹಲವಾರು ಗಣ್ಯ ವ್ಯಕ್ತಿಗಳು ಕಳುಹಿಸಿದ ಸಂದೇಶವನ್ನು ಸಹ ವಾಚಿಸಲಾಯಿತು.

ಮಧ್ಯಾಹ್ನ ಬೋಜನದ ನಂತರ ಕೊಡಗು ಗೌಡ ಮಹಿಳಾ ಒಕ್ಕೂಟದ ಕಲಾವೃಂದದವರಿಂದ ಸಾಂಸ್ಕೃತಿಕ ಕಾರ್ಯಕ್ರಮ ವಿತ್ತು. ಇದರ ಉಸ್ತುವಾರಿಯನ್ನು ಬೈತಡ್ಕ ಜಾನಕ್ಕಿ ದೇವಮ್ಮ ಜೋಡಿವೃಂದ, ಚಿಯಂಡಿರ ರಾಧ ಯಾದವ, ಪೊನ್ನಚನ ಲಲಿತ ವಹಿಸಿದ್ದರು. ಕಟ್ರತನ ದಮಯಂತಿ ನಿರೂಪಿಸಿ ಪ್ರಸ್ತುತ ಪಡಿಸಿದರು. ಉಡುದೋಳಿ ಸ್ವರ್ಣ ಗಣಪತಿಯವರಿಂದ ಪ್ರಾರ್ಥನೆ, ಚಂಡಿರ ಮಂದಾ ಉತ್ತಪ್ಪನವರಿಂದ ಜ್ಯೋತಿಯ ಬೆಳಗೋಣಾ, ಹರಿಸೇನೆ ಹಾಡು, ಹಚ್ಚೇವು ಕನ್ನಡದ ದೀಪ, ಗ್ರಾಂಥಳ ಡ್ಯಾನ್ಸ್, ಜಾನಕಿ ವಿರಚಿತ ಮಹಾಚೇತನ, ಬಾವನಳಿಂದ ವೀರಕನ್ನಡಿಗ ನೃತ್ಯ, ಗಾಳಿಬೀಡಿನ ನೂತನ ತಂಡದವರಿಂದ ಸುಗ್ಗಿ ಸುವ್ವಾಲೆ ಕುಣಿತ, ದೆವಂಗೋಡಿ ಪಾರ್ವತಿಯವರ ಶೋಬಾನೆ, ಜಯಶ್ರೀಯವರ ಮುತ್ತ ಮುತ್ತ ಅರಸುತ್ತಾ ನೃತ್ಯ, ಕೊನೆಯಲ್ಲಿ ಬಾರಿಕೆ ಮನುರವರ ಕಿಕ್ ಡ್ಯಾನ್ಸ್ ಅತ್ಯುತ್ತಮವಾಗಿ ಮೂಡಿ ಬಂದು ನೆರೆದ ಸಭಿಕರನ್ನು ಮನಸೂರೆಗೊಳ್ಳುವಲ್ಲಿ ಯಶಸ್ವಿಯಾಯಿತು.

*ಹಿನ್ನಲೆ:* ದಿನಾಂಕ 9-4-1997 ರಲ್ಲಿ ಕೊಡಗು ಸಂಗಾತಿ ಪತ್ರಿಕೆ ಜನಿಸಿ ತನ್ನ ಪ್ರಚಾರಕ್ಕಾಗಿ ನಾಡಿನ ಉದ್ದಗಲಕ್ಕೂ ಸಂಚರಿಸುತ್ತಿದ್ದ ಸಮಯ. ಆಗ ವೀರಾಜಪೇಟೆಯಲ್ಲಿ ಗೌಡ ಜನಾಂಗಕ್ಕಾಗಿ ಸಂಘಟನೆಯ ಐಕ್ಯತೆಯ ಕೊರತೆಯನ್ನುಗುರುತಿಸಿದ ಸಂಗಾತಿಯೂ ವೀರಾಜಪೇಟೆ ಖಾಸಗಿ ಬಸ್ ನಿಲ್ದಾಣದಲ್ಲಿ ಅಂಗಡಿಯ ಮಾಲಿಕ ಪರಿಚಯದ ಜನಪ್ರಿಯ ವ್ಯಕ್ತಿ ಈ ಬಾರಿಕೆ ಮನೋಜ್ ಕುಮಾರ್‌ನವರನ್ನು ಪುಸಲಾಯಿಸಿ ಹೇಗಾದರೂ ಮಾಡಿ ಒಂದು ಸಭೆಯನ್ನು ಕರೆಯುವಂತೆ ಪ್ರಚೋದಿಸಿದ್ದು ಅಲ್ಲದೆ ಕೋರಿಯರ್ ಆನಂದ್, ಮಕ್ಕಳಾದ ಕಿರಣ್ ಮತ್ತು ಕಿಸು, ಬಿಳಿಯನ ಆಶಾ, ಚಂಡೀರ ಜಗದೀಶ್, ಗೌಡುಧಾರೆ ಬಿದ್ದಪ್ಪ, ಗೌಡುದಾರೆ ಕು. ರೀನಾ ರಾಮಯ್ಯ ಪೊಕ್ಕುಲಂಡ ಪಾರ್ವತಿ, ಚೆಟ್ಟಿನೆರವನ ಬೋಜಮ್ಮನವರು ಜನ ಸಂಘಟಿಸಿದರ ಫಲವಾಗಿ ದಿನಾಂಕ 20-12-1998 ರ ಭಾನುವಾರ ವಿರಾಜಪೇಟೆಯ ಕಿತ್ತೂರು ರಾಣಿ ಚೆನ್ನಮ್ಮ ರಸ್ತೆಯಲ್ಲಿರುವ ಕರ್ನಾಟಕ ಸಂಘದ ಕಟ್ಟಡದಲ್ಲಿ ವೀರಾಜಪೇಟೆ ತಾಲೂಕಿನ ಗೌಡ ನಾಗರಿಕರನ್ನು ಸೇರಿಸುವಂತಾಯಿತು.

ಅಂದಿನ ಪ್ರಥಮ ಸಭೆಯ ಅಧ್ಯಕ್ಷತೆಯನ್ನು ಕೆದು ಮುಳ್ಳೂರು ಗ್ರಾಮದ ಪೊಕ್ಕುಲಂಡ ಸುಬ್ಬಯ್ಯನವರು ವಹಿಸಿದ್ದರು. ವೇದಿಕೆಯಲ್ಲಿ ಕೋರಿಯರ್ ಆನಂದ ಹಾಗೂ ಅವರ ಮಾತೃಶ್ರೀ ಮುತ್ತವ್ವ, ಶ್ರೀ ಪಟ್ಟಡ ಪ್ರಭಾಕರ್, ದೇವಜನ ರಾಮಯ್ಯ, ಪಡಿಕಲ್ ಮಾದಪ್ಪ, ಪೊಕ್ಕುಲಂಡ ಸುಬ್ಬಯ್ಯ, ಗೌಡ ಸಾಂಸ್ಕೃತಿಕ ಅಕಾಡೆಮಿ ಉಪಾಧ್ಯಕ್ಷ ಗುಡ್ಡೆಮನೆ ರಮೇಶ್, ಅರೆಭಾಷಿಕ ಸಾಂಸ್ಕೃತಿಕ ಸಮಿತಿ ಮೈಸೂರು ಇದರ ಅಧ್ಯಕ್ಷರಾದ ತಡಿಯಪ್ಪನ ಕುಮಾರ ಜಯನವರು ಉಪ ಸ್ಥಿತರಿದ್ದರು. ಕೊಡಗು ಗೌಡ ಸಂಘಟನೆಯನ್ನು ಕಾರ್ಯ ಪ್ರವೃತ್ತಿಗೊಳಿಸಲು ಕೆಳಗಿನ ಸಮಿತಿಯನ್ನು ರಚಿಸಲಾಯಿತು. ಅಧ್ಯಕ್ಷರಾಗಿ ಪಡಿಕಲ್ ಮಾದಪ್ಪ, ಉಪಾಧ್ಯಕ್ಷರಾಗಿ ಕೋರಿ ಯಾರ್ ಆನಂದ್, ಕಾರ್ಯದರ್ಶಿಯಾಗಿ ಮೂಡಗದ್ದೆ ರಾಮಕೃಷ್ಣ, ಸಂಘಟನಾ ಕಾರ್ಯದರ್ಶಿಗಳಾಗಿ ಬಾರಿಕೆ ಮನೋಜ್ ಕುಮಾರ್ ಮತ್ತು ಪೊಕ್ಕುಲಂಡ ಪಾರ್ವತಿ ಗಣಪತಿ, ಖಜಾಂಚಿಯಾಗಿ ಪೊಕ್ಕುಲಂಡ ಸುಬ್ಬಯ್ಯನವರನ್ನು ಅಲ್ಲದೆ ಸಮಿತಿ ಸದಸ್ಯರುಗಳಾಗಿ ಗೌಡುದಾರೆ ಬಿದ್ದಪ್ಪ, ಕೋಳಿಮಾಡು ತಿಮ್ಮಯ್ಯ, ಅಣ್ಣಮಂಡ್ರ ನಂದ ಮೊಣ್ಣಪ್ಪ, ಪೆರುಬಾಯಿ ಪುಟ್ಟಸ್ವಾಮಿ, ಮುಕ್ಕಾಟಿ ಈರಪ್ಪ, ಬೈಮನ ನಾಣಯ್ಯ ಚೆಟ್ಟಿನೆರವನ ಬೋಜಮ್ಮ, ಚಂಡಿರ ದೇವರಾಜ್, ಪಡಿಕಲ್ ನಿಧಿ, ದೇವಜನ ಕೇಶವ, ಗೌಡುಧಾರೆ ರೀನಾ ರಾಮಯ್ಯ, ಕೋರಿಯಾರ್ ಪುಟ್ಟಸ್ವಾಮಿ, ಇವರುಗಳನ್ನು ಸರ್ವಾನು ಮತದಿಂದ ಆರಿಸಿ ಅವರುಗಳು ಸಂಘಟನೆ ಬಗ್ಗೆ ಶಕ್ತಿ ಮೀರಿ ಶ್ರಮಿಸುವುದಾಗಿ ಪ್ರತಿಜ್ಞೆಗೈದು ಭರವಸೆಯನ್ನಿತ್ತರು. ಸಭೆಯಲ್ಲಿ

15 ನೇ ಪುಟಕ್ಕೆ

**ಮಾನವನೋರ್ವನಿಗಾಗಿ ಪ್ರಾಣ ತೆರುವವನಿಗಿಂತ ಗುರಿಯೊಂದಕ್ಕಾಗಿ ಪ್ರಾಣ ತೆರುವವನೇ ಶ್ರೇಷ್ಠನಾಗುತ್ತಾನೆ.**

# ರಾಜರಾಮ ಮೋಹನರಾಯರ ನೆನಪು



ನಮ್ಮ ಸಮಾಜದಲ್ಲಿ ಆಳವಾಗಿ ಬೇರೂರಿದ್ದ ಅನಿಷ್ಟ ಕಂದಾಚಾರಗಳ ಬುಡಕ್ಕೆ ಕೊಡಲಿ ಪೆಟ್ಟು ಹಾಕಿದ ಪ್ರಥಮ ಕ್ರಾಂತಿಕಾರಿ ರಾಜಾರಾಮ್ ಮೋಹನ್‌ರಾಯ್. ಅವರ ಕ್ರಾಂತಿಕಾರಿ ಸುಧಾರಣೆ ದಿಟ್ಟ ಮನೋಭಾವ ಭಾರತೀಯ ಸಮಾಜಕ್ಕೆ ನಮವಚೈತನ್ಯ ಕೊಟ್ಟಿತು.

232 ವರ್ಷಗಳ ಹಿಂದೆ 1772 ಮೇ 22 ರಂದು ಬಂಗಾಳದಲ್ಲಿ ಜನಿಸಿದ ರಾಜಾರಾಮ ಮೋಹನರಿಗೆ ಬಾಲ್ಯದಲ್ಲೇ ವಿದ್ಯಾಭ್ಯಾಸದಲ್ಲಿ ಬಹು ಆಸಕ್ತಿ. ಪರಿಣಾಮ ತಂದೆಯಿಂದ ಸಂಸ್ಕೃತ ಫಾರ್ಶಿ, ಅರಬ್ಬೀ ಭಾಷೆಗಳನ್ನು ಅಭ್ಯಾಸಿಸಿದರು. ಸೂಕ್ಷ್ಮಮತಿಯಾಗಿದ್ದ ಇವರು ಸಮಸ್ತ ವಿಷಯಗಳನ್ನೂ ಲೀಲಾಜಾಲವಾಗಿ ಗ್ರಹಿಸುತ್ತಿದ್ದರು. ಅವರ ಜ್ಞಾಪಕ ಶಕ್ತಿ ಅಗಾಧವಾಗಿತ್ತು.

ಅಂದಿನ ಸಾಮಾಜಿಕ ಕಟ್ಟುಪಾಡುಗಳನ್ವಯ ಇವರಿಗೆ ಒಂಭತ್ತನೇ ವಯಸ್ಸಿಗೆ ಮುಂಚೆಯೇ ಒಂದು ಲಗ್ನವಾಗಿದ್ದು, ಆ ಬಾಲ್ಯ ಪತ್ನಿ ಕಾಲವಾದ ನಂತರ ಇವರ ತಂದೆ ಒಂದು ವರ್ಷದೊಳಗೆ ಮತ್ತೆರಡು ಲಗ್ನಮಾಡಿದರು.

ಪಾಟ್ನಾದಲ್ಲಿ ಉನ್ನತ ಅಭ್ಯಾಸ ಮಾಡಿದ ರಾಜಾರಾಮರು ಹದಿನಾರು ವರ್ಷದ ಬಾಲಕನಾಗಿದ್ದಾಗ ತನ್ನ ಮನೋಭಿಪ್ರಾಯಗಳಿಗೆ ವಿರೋಧವಾಗಿ ವರ್ತಿಸಲು ಅವರ ಮನ ಸಮ್ಮತಿಸಲಿಲ್ಲ. ಗೃಹತ್ಯಾಗ ಮಾಡಿ ಏಕಾಂಗಿಯಾಗಿ ದೇಶ ಸಂಚಾರದಲ್ಲಿ ನಿರತರಾದರು. ಬ್ರಿಟಿಷರ ದಾಸ್ಯದ ಕೆಳಗಿನ ಅಸಹನೀಯ ಬದುಕು ಅವರಿಗೆ ಹಿಡಿಸಲಿಲ್ಲ.

ಒಮ್ಮೆ ದೇಶಸಂಚಾರ ಮಾಡುತ್ತಾ ಅವರು ಟಿಬೆಟಿಗೆ ತೆರಳಿದರು. ಕೆಲಕಾಲ ನಂತರ ದಲೈಲಾಮನ ಪೂಜೆಯನ್ನು ಅವರು ನಿರ್ಭಯವಾಗಿ ಖಂಡಿಸಿದಾಗ ಅವರು ದಲೈ-ಲಾಮನ ಭಕ್ತರ ಕೆಂಗಣ್ಣಿಗೆ ಗುರಿಯಾದರು. ಅವರ ಪ್ರಾಣಕ್ಕೇ ಕುತ್ತು ಒದಗಿ ಬಂತು. ಇಂತಹ ಸಂದರ್ಭದಲ್ಲಿ ಸಾಧ್ವಿ ಸ್ತ್ರೀಯೊಬ್ಬಳು ಅವರನ್ನು ರಕ್ಷಿಸಿದಳು. ಅಂದಿನಿಂದಲೇ ಸ್ತ್ರೀಯರ ಹಕ್ಕುಗಳ ಬಗ್ಗೆ ಹೋರಾಡಲು ಅವರು ನಿರ್ಧರಿಸಿದರು.

ಇಪ್ಪತ್ತೈದು ವರ್ಷದ ಯುವಕನಾಗಿ ಬೆಳೆದ ಮೋಹನ್‌ರಾಯರು ಮರಳಿ ಭಾರತಕ್ಕೆ ಬಂದಾಗ ಮನೆಯವರಿಂದ ಭವ್ಯ ಸ್ವಾಗತ ದೊರಕಿತು. ಪತ್ರಿಕಾರಂಗದತ್ತ ಧುಮುಕಿದ ಇವರು ಬ್ರಿಟಿಷರ ಒತ್ತಡಕ್ಕೆ ಮಣಿಯದೆ ತನ್ನ ಲೇಖನಿಯನ್ನು ಹರಿತಗೊಳಿಸಿದರು.

ಸತಿ-ಸಹಗಮನ, ಬಾಲ್ಯವಿವಾಹ ಮೊದಲಾದ ಅನಿಷ್ಟ ಸಂಪ್ರದಾಯಗಳ ವಿರುದ್ಧ ಸಿಡಿದೆದ್ದ ಇವರು, ಸಂಪ್ರದಾಯಸ್ಥರ ಕೆಂಗಣ್ಣಿಗೆ ಗುರಿಯಾದರು.

ಬ್ರಹ್ಮಸಮಾಜವನ್ನು ಸ್ಥಾಪಿಸಿ, ನಾನಾ ಸ್ವರೂಪದ ಸುಧಾರಣೆಗಳನ್ನು ತಂದರು. ದೈವ ನಿರಾಕಾರ ತತ್ವವನ್ನು ಪ್ರತಿಪಾದಿಸಿದರು. ನವಭಾರತಕ್ಕೆ ವರ್ಣಾಶ್ರಮ ಅನ್ವಯಿಸು ವುದಿಲ್ಲವೆಂದು ಸಾರಿದರು.

ಮೋಹನರಾಯರು ಸಮಾಜದ ಕುಂದುಕೊರತೆಗಳನ್ನು ಮತಗಳ ನಡುವೆ ಇರುವ ಭಿನ್ನ ಭಾವನೆಗಳನ್ನು ಕಂದಾಚಾರಗಳನ್ನು ರಾಜಕೀಯದಲ್ಲಿರುವ ನ್ಯೂನತೆಗಳನ್ನು ಟೀಕಿಸುವುದರಲ್ಲಿ ಮಾತ್ರವಲ್ಲದೆ, ಆ ಲೋಪದೋಷಗಳ ನಿವಾರಣೆಗಾಗಿ ರಚನಾತ್ಮಕ ದೃಷ್ಟಿಯಿಂದ ಅವಶ್ಯಕ ಸುಧಾರಣೆಗಳನ್ನು ಸೂಚಿಸಿದರು. ಕೇವಲ ಟೀಕೆಯನ್ನೇ ಮಾಡುವುದರಲ್ಲಿಯೇ ನಿರತರಾಗಿದ್ದಿದ್ದರೆ, ಅವರ ಪ್ರಭಾವ ಪ್ರಕಾಶವಾಗುತ್ತಿರಲಿಲ್ಲ. ಸೂಚನೆಗೆ ತಕ್ಕಂತೆ ಅನುಷ್ಠಾನ ಪೂರ್ವಕ ಮಾರ್ಗದರ್ಶಕ ರಾಗಿದ್ದುದರಿಂದಲೇ ಅವರನ್ನು ಮಹಾಪುರುಷರೆಂದು ಪರಿಗಣಿಸಲ್ಪಟ್ಟಿರುವುದು.

ಮೋಹನರಾಯರು ಒಬ್ಬ ಮತ ಸುಧಾರಕರಾಗಿಯೂ, ರಾಜಕೀಯ ಸ್ವಾತಂತ್ರ್ಯ ಸಂಪಾದನೆಯಲ್ಲಿ ಅಗ್ರಗಣ್ಯರಾಗಿಯೂ, ಸ್ತ್ರೀಯರ ಶ್ರೇಯೋಭಿವೃದ್ಧಿಗಾಗಿಯೂ ನಾನಾ ಕ್ಷೇತ್ರಗಳಲ್ಲಿ ಸುಧಾರಕರಾಗಿಯೂ ಅಹರ್ನಿಶಿಯೂ ಶ್ರಮಪಟ್ಟು ದುಡಿದ ಕಾರಣ ಇವರನ್ನು 'ರಾಜರ್ಷಿ' ಎಂದೂ ಶ್ರೇಷ್ಠಾ ಆಚಾರ್ಯರಲ್ಲಿ ಒಬ್ಬರೆಂದೂ, ಭಾರತದಲ್ಲಿ ನವಚೈತನ್ಯ ಉಂಟುಮಾಡಿದ 'ಯುಗಪುರುಷ'ರೆಂದೂ ಜಗತ್ತು ಕೊಂಡಾಡಿದೆ.

-ಸಂಗಾತಿ

# ನರಿಯಂದಡ ಅಯ್ಯಪ್ಪ ಕ್ರಿಕೆಟ್ ಕಪ್ ಪೊಕ್ಕುಲಂಡ ಕುಟುಂಬದ ಮಡಿಲಿಗೆ

ಚೆಯ್ಯಂಡಾಣೆ ಸಮೀಪ ನರಿಯಂದಡ ಗ್ರಾಮದ ಅಯ್ಯಪ್ಪ ಯುವಕ ಸಂಘದ ಆಶ್ರಯದಲ್ಲಿ ದಿನಾಂಕ 18-4-2004 ರಲ್ಲಿ ನರಿಯಂದಡ ಗ್ರಾಮ ಪಂಚಾಯಿತಿ ವ್ಯಾಪ್ತಿಗೆ ಸೇರಿದ 8 ಗೌಡ ಕುಟುಂಬಗಳ ನಡುವಣ ಟೆನ್ನಿಸ್ ಬಾಲ್ ಕ್ರಿಕೆಟ್ ಪಂದ್ಯಾಟದಲ್ಲಿ ಪೊಕ್ಕುಲಂಡ ತಂಡವು ತೋಟಂಬೈಲು ತಂಡವನ್ನು ಫೈನಲ್ ಪಂದ್ಯದಲ್ಲಿ ಕೇವಲ 17 ರನ್ನುಗಳಿಗೆ ನಿಯಂತ್ರಿಸಿ ಟ್ರೋಫಿಯನ್ನು ತನ್ನದಾಗಿಸಿಕೊಳ್ಳುವಲ್ಲಿ ಯಶಸ್ವಿಯಾಯಿತು. ಇದು ಮೂರನೇ ವರ್ಷದ ಹ್ಯಾಟ್ರಿಕ್ಸ್ ಸಾಧನೆಯು ಸಹ ಹೌದಾಗಿದೆ.

ಮೂರು ಗ್ರಾಮಗಳಾದ ನರಿಯಂದಡ, ಚೇಲಾವರ ಹಾಗೂ ಮರಂದೋಡ ಗ್ರಾಮಗಳ ಸುಮಾರು 8 ಗೌಡ ಕುಟುಂಬದವರಿಂದ ಬಿಳಿಯನ, ಪೊಕ್ಕುಲಂಡ, ತೋಟಂಬೈಲು, ಚಂಡೀರ ಕೋಳಿ ಮಾಡು, ಬಾರಿಕೆ, ಮುಕ್ಕಾಟಿ ಹಾಗೂ ಜೈನೀರ ಕುಟುಂಬಗಳ ತಂಡಗಳು ಭಾಗವಹಿಸಿ ತಮ್ಮ ಕ್ರೀಡಾ ಪ್ರದರ್ಶನವನ್ನು ಮೆರೆದರು. ಅತ್ಯುತ್ತಮ ಬ್ಯಾಟ್ಸ್‌ಮನ್ ಪ್ರಶಸ್ತಿಯನ್ನು ಪೊಕ್ಕುಲಂಡ ದೇವಿ ಕಾಂತ್ ಪಡೆದರೆ, ಅತ್ಯುತ್ತಮ ಬೌಲರ್ ಪ್ರಶಸ್ತಿಯನ್ನು ಪೊಕ್ಕುಲಂಡ ಬಿಂದ್ ಪಡೆದರು. ಪಂದ್ಯಾಟದ ಮೊದಲಿಗೆ ಪ್ರತಿ ತಂಡದ ಆಟಗಾರರಿಗೆ ಕ್ರಮವಾಗಿ ಪೊಕ್ಕುಲಂಡ ಚಿಣಪ್ಪ, ಪಟ್ಟಡ ಪ್ರಭಾಕರ್, ಚಂಡಿ ಚಿಣಪ್ಪ, ತೋಟಂಬೈಲು ಕಾವೇರಮ್ಮ, ತೋಟಂಬೈಲು ಪ್ರೇಮಾ ಅನಂತ್, ಬಿಳಿಯನ ವಾಸುರವರಿಗೆ ಪರಿಚಯಿಸಿ, ಶುಭ ಹಾರೈಸಿದರು.

ಸಭೆಯಲ್ಲಿ ಮುಖ್ಯ ಅತಿಥಿಗಳಾಗಿ ಕೊಡಗು ಸಂಗಾತಿ ಪತ್ರಿಕೆಯ ಗೌರವ ಸಂಪಾದಕ ಪಟ್ಟಡ ಪ್ರಭಾಕರ, ಗೌಡ ಸಾಂಸ್ಕೃತಿಕ ಅಕಾಡೆಮಿ ಅಧ್ಯಕ್ಷ ತುಂತಜೆ ಗಣೇಶ್‌ನವರು, ತೋಟಂಬೈಲು ಪ್ರೇಮ್ ಅನಂತ್ ನವರು ಉಪಸ್ಥಿತರಿದ್ದರು. ಸುಮಾರು 400 ಕ್ಕೂ ಹೆಚ್ಚು ಪ್ರೇಕ್ಷಕರು ಹಾಜರಿದ್ದು ಪಂದ್ಯಾಟವನ್ನು ವೀಕ್ಷಿಸಿ ಪ್ರೋತ್ಸಾಹಿಸಿದರು.

ಪೊಕ್ಕುಲಂಡ ಕುಟುಂಬಸ್ತರ ಪಟ್ಟೆದಾರರಾದ ಚಿಣಪ್ಪನವರು ಸಮಾರೋಪ ಸಮಾರಂಭದಲ್ಲಿ ಅಧ್ಯಕ್ಷತೆ ವಹಿಸಿ, ಬಹುಮಾನ ವಿತರಿಸಿದರು. ಅದಕ್ಕೂ ಮೊದಲು ಬೆಳಿಗ್ಗೆ ಪಂದ್ಯಾಟವನ್ನು ಉದ್ಘಾಟಿಸಿ ಶುಭ ಹಾರೈಸಿದರು. ಸಮಾರಂಭದಲ್ಲಿ ಕೊಡಗು ಸಂಗಾತಿ ಪತ್ರಿಕೆಯ ಗೌರವ ಸಂಪಾದಕರಾದ ಪಟ್ಟಡ ಪ್ರಭಾಕರ್‌ರವರು ಕ್ರಿಕೆಟ್, ಗೌಡ ಜನಾಂಗ ಮತ್ತು ಪತ್ರಿಕೆಯ ಅನಿವಾರ್ಯತೆ ಬಗ್ಗೆ ಮಾತನಾಡಿದರು. ಅಯ್ಯಪ್ಪ ಯುವಕ ಸಂಘದ ಅಧ್ಯಕ್ಷ, ಮಾಜಿ ಯೋಧರಾದ ಬಿಳಿಯನ ಲಕ್ಷ್ಮಣನವರು ಸ್ವಾಗತಿಸಿ ವಂದಿಸಿದರು.

-ಸಂಗಾತಿ

**ಜೀವನದಲ್ಲಿ ಒಂದು ಗುರಿಯನ್ನು ಹೊಂದಿರುವುದೆ ಅವನಿಗೆ ಖಿಲಾಯಿಸಿರುವ ಅತೀ ದೊಡ್ಡ ಅದೃಷ್ಟವೆನ್ನಬಹುದು.**

# ಭಾಗ -2 ನಾಥ ಪರಂಪರೆಯ ಶ್ರೀಮಠ





ಶೈವ ಸಂಪ್ರದಾಯದ ಮುಖ್ಯ ಪ್ರಭೇದ 'ನಾಥ ಪಂಥ' ನಾಥ ಎಂದರೆ ಸ್ವಾಮಿ ಪ್ರಭು, ಒಡೆಯ, ಶಿವನೇ ಜಗತ್ತಿಗೆಲ್ಲಾ ಸ್ವಾಮಿ, ಸರ್ವಕರ್ತ, ಅವನಲ್ಲಿ ಅಂತರ್ಗತವಾಗಿರುವ ಚೈತನ್ಯವೇ ಶಕ್ತಿ. ಶಿವ ಶಕ್ತಿಯ ರಿಬ್ಬರೂ ಅಭೇದ್ಯರು. ಇವರಿಬ್ಬ ರಿಂದಲೇ ಜಗತ್ತಿನ ಸೃಷ್ಟಿ, ಸ್ಥಿತಿ, ಲಯ, ಸಮರ್ಥ ಗುರುವಿನ ಮಾರ್ಗದರ್ಶನಸ ನೈಷ್ಠಿಕ ಬ್ರಹ್ಮಚರ್ಯ, ಯೋಗಾನುಷ್ಠಾನಗಳ ಸಿದ್ಧಿಯಿಂದ ಶಿವ ಶಕ್ತಿಯರ ಸಾಕ್ಷಾತ್ಕಾರ ಪಡೆಯಬಹುದೆಂಬ ತತ್ವವೇ ನಾಥ ಸಿದ್ಧಾಂತ.

ನವನಾಥರು ಈ ಪಂಥದ ಪ್ರಮುಖರು. ಒಂದೆರಡು ಹೆಸರುಗಳಲ್ಲಿನ ವ್ಯತ್ಯಾಸದ ಹೊರತು ನವನಾಥ ಭಕ್ತಿ ಸಾರ ಮತ್ತು ಆದಿಚುಂಚನಗಿರಿ ಸ್ಥಳ ಮಹಾತ್ಮೆ ಕೃತಿಗಳಲ್ಲಿ ನಾಥ ಪ್ರಮುಖರು ಒಂಭತ್ತು ಮಂದಿ ಎಂದೇ ವಿವರಿಸಲಾಗಿದೆ. ಅವರು ಕ್ರಮವಾಗಿ ಮತ್ಸ್ಯಂದ್ರನಾಥ (ಮಚ್ಚೇಂದ್ರ) ಗೋರಕ್ಷನಾಥ (ಗೋರಖ) ಜಾಲಂಧರನಾಥ, ಕಾನೀಫನಾಥ, ಗಹಿನಿನಾಥ. ಭರ್ತರಿನಾಥ, ರೇವಣನಾಥ, ನಾಗನಾಥ, ಚರಪಟನಾಥ.

ಗುರುಪಾರಮ್ಯದಲ್ಲಿ ನಂಬಿಕೆಯಿಟ್ಟು, ಯೋಗದಲ್ಲಿ ಮುನ್ನಡೆದು, ವಿರಕ್ತನಾದ ನಾಥ ಸಿದ್ಧಾಂತಿಗಳು ಸನಾತನ ತತ್ವಗಳ ಹಾಗೂ ವರ್ಗ, ವರ್ಣ, ಜಾತಿ ಪದ್ಧತಿಗಳ ಕಡುವಿರೋಧಿಗಳು. ಜಾತ್ಯಾತೀತತೆ ಮತ್ತು ಸರ್ವ ಸಮಾನತೆಯ ಆಧಾರದ ಮೇಲೆ ನಿಂತ ನಾಥ ಪಂಥದ ಮುಖ್ಯ ಗುರಿಯೇ ಸಮಾಜೋದ್ಧಾರ.

ಶೈವ ಮತ್ತು ಶಾಕ್ತ ಪಂಥಗಳ ಆದಿಗುರು ದತ್ತಾತ್ರೇಯ. ನಾಥ ಪಂಥದ ಮೂಲ ಪುರುಷನೆನಿಸಿದ ಮಚ್ಛೇಂದ್ರನಾಥ, ವಕ್ತಾರನಾದ ಗೋರಖನಾಥರು ದತ್ತಾತ್ರೇಯನಿಂದ ಅನುಗ್ರಹಿತ ರಾದ ದತ್ತಪಂಥದ ಕರ್ತೃಗಳು. ಬ್ರಹ್ಮ, ವಿಷ್ಣು, ಮಹೇಶ್ವರರ ಸಂಗಮರೂಪಿ ದತ್ತಾತ್ರೇಯನ ಪರಿಕಲ್ಪನೆಯಲ್ಲಿ ಭಾವೈಕ್ಯತೆ ಮತ್ತು ಧರ್ಮ ಸಮನ್ವಯ ತತ್ವಗಳೇ ಅಡಗಿವೆ. ಮಹಾರಾಷ್ಟ್ರ ದಲ್ಲಿ ಭಕ್ತಿ ಚಳುವಳಿಯ ಸಂದರ್ಭದಲ್ಲಿ ನಾಥಪಂಥದೊಡನೆ ಸೂಫಿ ಪಂಥವು ಜೊತೆ ಜೊತೆಯಾಗಿ ಬೆರೆಯಿತು. ಇದಕ್ಕೆ ಕಾರಣ ಮಾನವೀಯತೆ ಮತ್ತು ಉದಾತ್ತವಾದಕ್ಕೆ ನಾಥ ಪಂಥ ಕೊಟ್ಟ ಮಾನ್ಯತೆ. ಸೂಫಿ ಸಂತರು ದತ್ತ ಚೈತನ್ಯನನ್ನೇ ತಮ್ಮ ಗುರು ಎಂದು ಪರಿಗಣಿಸಿದರು. ಅದರ ಪರಿಣಾಮವಾಗಿ ಇಂದಿಗೂ ಉತ್ತರ ಕರ್ನಾಟಕ ಮತ್ತು ಮಹಾರಾಷ್ಟ್ರಗಳಲ್ಲಿ ದತ್ತ ಪೀಠಗಳೂ ಸೂಫಿ ದರಗಾಗಳೂ ಒಟ್ಟೊಟ್ಟಿಗೆ ಇದ್ದು ಜಾತ್ಯಾತೀತತೆಯನ್ನು ತೋರುವಂತಿವೆ. ಉದಾ ಅಂಕಲಗಿ, ಕೊಣ್ಣೂರು, ಸವದತ್ತಿ, ವಡಬಾಳ, ಅಕ್ಕಲ ಕೋಟೆ, ಬಾಬಾ ಬುಡನ್ ಗಿರಿ ಮೊದಲಾದೆಡೆ ಎಂದು ಶಂ. ಬಾ. ಜೋಷಿಯವರು ಸಾದರಪಡಿಸಿದ್ದಾರೆ.

ನಾಥರ ಪ್ರಸಿದ್ಧ ಪುಣ್ಯ ಕ್ಷೇತ್ರಗಳೆಂದರೆ ಕಾಶಿಯ ಭೈರವನಾಥ, ಸೋನೇಪುರದ ಹರಿಹರನಾಥ, ಗೋರಖಪುರದ ಗೋರಖನಾಥ, ಪಂಜಾಬಿನ ತಿಲ್ಲನಾಥ, ಪುರಿಯ ಜಗನ್ನಾಥ, ನೇಪಾಳದ ಪಶುಪತಿನಾಥ, ಹಿಮಾಲಯದ ಕೇದಾರನಾಥ, ಚಿತ್ತಗಾಂಗಿನ ಪಾರ್ಶ್ವನಾಥ ದೇವಾಲಯಗಳು ಉತ್ತರ ಭಾರತ ದಲ್ಲಿವೆ.

ದಕ್ಷಿಣ ಭಾರತದಲ್ಲಿ ನಾಥ ಪಂಥದ ಪ್ರಮುಖ ಕೇಂದ್ರ ಗಳೆಂದರೆ ಮಂಡ್ಯ ಜಿಲ್ಲೆಯ ಆದಿಚುಂಚನಗಿರಿ, ಮಂಗಳೂರಿನ ಕದ್ರಿ, ಕಾಸರಗೋಡಿನ ಪೊಸಡಿ ಗುಂಪೆ ಗುಹೆಗಳು, ಉತ್ತರ ಕನ್ನಡದ ಬೇಡಕೇಹಾಳ ಹಾವೇರಿಯ ಕರಜಗಿ, ಯಾಣದ ಭೋರವೇಶ್ವರ ಕ್ಷೇತ್ರ ನಾಥ ಪಂಥೀಯ ಜೋಗಿಮಠಗಳೆಂದರೆ ಆದಿಚುಂಚನಗಿರಿ ಮಠ, ಮೈಸೂರಿನ ಸೋಮುಖ ಮಠ, ಚಿತ್ರದುರ್ಗದ ಲೋಂಕಿ ಮಲೆಯ ಸಿದ್ದೇಶ್ವರಸ್ವಾಮಿಯೋಗಿ ಮಠ, ಮೊಳಕಾಲ್ಮೀರಿನ ಗಂಗಾಧರೇಶ್ವರ ಸ್ವಾಮಿ ಮಠ, ಯಯ್ಯಾಡಿಯ ಭೈರವನಾಥ ಮಠ, ಮಂಕಿ ಮಲೆಯ ಸಿದ್ಧ ಪೀಠ ಕದ್ರಿಯ ಯೋಗೀಶ್ವರ ಮಠ, ಕುಂದಾಪುರದ ಹಿಲೋರಿ ಮಠ, ಕಾಸರಗೋಡಿನ ಉದ್ಯಾವರದ ಜೋಗಿ ಮಠ, ಕಂಬ್ರಾಡದ ಅರಣ್ಯದಲ್ಲಿರುವ ಹಾಂಡಿಬಡಂಗನಾಥ ಮಠ ಮೊದಲಾದುವು.

ಅನೇಕ ಆಧಾರಗಳಿಂದ ನಾಥ ಪಂಥದ ಕೌಪಾಲಿಕ ಮತವೂ ಅಲ್ಲ. ವಾಮಾಚಾರ ಪಂಥವು ಅಲ್ಲ. ಮಾನವ ಕಲ್ಯಾಣವನ್ನೇ ಬಯಸುವ ಸಾತ್ವಿಕ ಮತ ಎಂಬ ಅಂಶ ಗಟ್ಟಿಯಾಗಿ ಸಿದ್ಧವಾಗಿದೆ. ಅಲ್ಲದೆ ಗೋರಕ್ಷನಾಥ ಕನ್ನಡಿಗನಾಗಿದ್ದು. ಕ್ರಿ. ಶ. ಎಂಟನೇ ಶತಮಾನದ ಉತ್ತರಾರ್ಧ ದಲ್ಲಾಗಲೇ ನಾಥಪಂಥ ಕರ್ನಾಟಕಕ್ಕೆ ಅಡಿಯಿಟ್ಟಿತ್ತೆಂದೂ, ಹತ್ತನೇ ಶತಮಾನಕ್ಕಾಗಲೇ ಆದಿಚುಂಚನಗಿರಿ ಅದರ ನೆಲೆಯಾಗಿದ್ದಿತೆಂದೂ ಸಾಬೀತಾಗಿದೆ. ಅಲ್ಲದೆ ವೀರ ಶೈವ ವಚನಕಾರರಾದ ಅಲ್ಲಮಪ್ರಭು, ಬಸವಣ್ಣ, ಚೆನ್ನಬಸವಣ್ಣ ಇದರ ಮೇಲೆ ನಾಥ ಸಿದ್ಧಾಂತಗಳು ಪ್ರಭಾವ ದಟ್ಟವಾಗಿ ಆಗಿದ್ದಿತೆಂಬುದಕ್ಕೆ ಅವರು ಕೆಲವಾರು ವಚನಗಳೇ ದೃಷ್ಟಾಂತ ವಾಗಿವೆ. ಅಲ್ಲಮ ಪ್ರಭೂ, ರೇವಣ ಸಿದ್ಧನಾಥ ಪಂಥೀಯರೆಂದು ಕಪಟರಾಳ ಕೃಷ್ಣರಾಯರು ನಿರೂಪಿಸಿದ್ದಾರೆ. ಎಡೆಯೂರು ಸಿದ್ಧಲಿಂಗಯತಿಯ ಶಿಷ್ಯನಾದ ಸಪ್ಪೇಸ್ವಾಮಿ ಆದಿಚುಂಚನಗಿರಿ ಯಲ್ಲಿ ತಪಸ್ಸು ಮಾಡಿದನೆಂಬುದಕ್ಕೆ ಕ್ರಿ. ಶ. ೧೫ನೇ ಶತಮಾನದ ಎಡೆಯೂರಿನ ಶಾಸನಾಧಾರವಿದೆ.

ಪ್ರಾರಂಭದಿಂದ ಪ್ರಸ್ತುತದವರಿಗೆ ಎಪ್ಪತ್ತೊಂದು ಜನ ಪೀಠಾಧ್ಯಕ್ಷರನ್ನು ಕಂಡಿರುವ ಆದಿಚುಂಚನಗಿರಿ ಸಿದ್ಧ ಸಿಂಹಾಸನದ ಅರವತ್ತೇಳನೇ ಪೀಠಾಧಿಪತಿಗಳಾದ ಶ್ರೀ ತೇಜನಾಥರು ಬಹಳ ಸ್ಪಷ್ಟವಾಗಿ ಈ ಮಠದ ಉತ್ತರಾಧಿಕಾರಿಗಳು ಒಕ್ಕಲಿಗರು. ಎಂದು ಹೇಳಿದ ತರುವಾರ ಇಲ್ಲಿ ಒಕ್ಕಲಿಗರ ಪ್ರಾಬಲ್ಯವನ್ನು ಸ್ಪಷ್ಟವಾಗಿ ಗುರುತಿಸ ಬಹುದಾಗಿದೆ. ಕ್ಷೇತ್ರ ಪಾಲಕನಾದ ಭೈರವೇಶ್ವರ ಕೃಷಿ ದೇವತೆಯೂ ಆಗಿರುವುದರಿಂದ ಇದು ಸಹಜವೂ ಆಗಿದೆ.

ಅರವತ್ತೆಂಟನೇ ಪೀಠಾಧ್ಯಕ್ಷರಾದ ಶ್ರೀ ಭಕ್ತನಾಥ ಸ್ವಾಮೀಜಿ, ಅರವತ್ತೊಂಬತ್ತನೆಯವರಾದ ಶ್ರೀ ಚಂದ್ರಶೇಖರ ನಾಥ ಸ್ವಾಮೀಜಿಯವರು ಬಹುಭಾಷ ಕೋವಿದರು. ಹಾಗೂ ಜ್ಞಾನಿಗಳು ಇವರೀರ್ವರ ಅವಧಿಯಲ್ಲಿ ಶ್ರೀಮಠದ ಪ್ರಗತಿ ಪ್ರಾರಂಭವಾಗಿ ನಂತರ ಶ್ರೀ ರಮಾನಾಥ ಸ್ವಾಮೀಜಿಯವರಿಂದ ಮುಂದುವರಿದು ಎಪ್ಪತ್ತೊಂದನೇ ಪೀಠಾಧಿಪತಿಗಳಾದ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರಿಂದಾಗಿ ವಿರಾಡ್ರೂಪ ದಿಂದ ಕಂಗೊಳಿಸಿದೆ. ನಾಥ ಶಿಷ್ಟಾಚಾರಕ್ಕೆ ಬದ್ಧರಾಗಿದ್ದು ಕೊಂಡೇ ಆಧುನಿಕ ಕಾಲಕ್ಕೆ ತಕ್ಕ ಶೈಕ್ಷಣಿಕ, ಸಾಮಾಜಿಕ ಸೇವಾ ಬಾಹುಳ್ಯದಿಂದಾಗಿ ಶ್ರೀ ಕ್ಷೇತ್ರಕ್ಕೆ ನೂತನ ಆಯಾಮ ನಾಡಿದ ಶಕ ಪುರುಷ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರು ಸಾಲದ ಹೊರೆ, ಆರ್ಥಿಕ ಶಿಥಿಲತೆಯಿಂದಾಗಿ ಹಿಂದುಳಿದಿದ್ದ ಆದಿ ಚುಂಚನಗಿರಿ ಮಠಕ್ಕೆ ಕಾಯಕಲ್ಪವನ್ನು ನೀಡಿದವರೇ ಇವರು.

***ಶ್ರೀಮಠದ ಬೆಳವಣಿಗೆಯಲ್ಲಿ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿ ಯವರ ಮಹತ್ವದ ಪಾತ್ರ***

ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರದು ನಿಸ್ವಾರ್ಥ ಪರವಾದ ದೂರದೃಷ್ಟಿಯ ವ್ಯಕ್ತಿತ್ವ. ಅದರ ಫಲವಾಗಿ ಶ್ರೀ ಕ್ಷೇತ್ರ ಈ ಹಿಂದೆ ಎಂದೂ ಕಾಣದಂತಹ ಅಪೂರ್ವ ಪ್ರಗತಿಯನ್ನು ಪಡೆಯಲು ಸಾಧ್ಯ ವಾಯಿತು. ಅವರು ಪೀಠಾಧ್ಯಕ್ಷರಾದ ಮೂರು ದಶಕಗಳಲ್ಲೇ ಸಹಸ್ರಮಾನಗಳಷ್ಟು ಸಾಧನೆಯನ್ನು ವಿಸ್ಮಯಕಾರಿಯಾಗಿ ಸಾಧಿಸಿದ್ದಾರೆ.

ಅವರ ತಾಳ್ಮೆ, ಸಹನೆ, ಅನುನಯದ ಮಾತು, ಪ್ರೀತಿ ವಾತ್ಸಲ್ಯ ಗಳನ್ನೇ ಹೊರ ಸೂಸುವ ಗುಣ ಎಂತಹವರನ್ನೂಅವರತ್ತ ಬಾಗುವಂತೆ ಮಾಡುತ್ತದೆ. ಶ್ರೀಗಳ ಈ ಆತ್ಮೀಯ ವ್ಯಕ್ತಿತ್ವವೇ ಅವರ ಸಂಘಟನಾ ಶೀಲತೆಯ ಮೊದಲ ಹಂತ. ಅನೇಕ ಪ್ರಾಂತ್ಯಗಳಲ್ಲಿ ಚದುರಿಹೋಗಿರುವ ಅನೇಕ ಪಂಗಡಗಳಿಂದ ಗುರುತಿಸಲಾಗುತ್ತಿರುವ ಒಕ್ಕಲಿಗ ಜನಾಂಗಕ್ಕೆ 'ನಾವೆಲ್ಲರೂ ಒಂದೇ' ಎಂಬ ಅಖಂಡತೆಯನ್ನು ಒತ್ತಟ್ಟಾಗಿ ತುಂಬುತ್ತಿರುವ

ಕಾಲಬದಲಾಗಬಹುದು. ಆದರೆ ಉತ್ತಮರ ಗುರಿಗಳೆಂದಿಗೂ ಬದಲಾಗವು.

ಫಲವಾಗಿ ಇಂದು ಆದಿ ಚುಂಚನಗಿರಿ ಮಠದ ಬಗ್ಗೆ ಒಕ್ಕಲಿಗರಿಗೆ ಸ್ವಾಭಿಮಾನ, ಇತರರಿಗೆ ಶ್ರೀಮಠದ ಸಮಾಜ ಸೇವೆಯ ಕುರಿತಾದ ಗೌರವ ಎದ್ದು ಕಾಣುತ್ತದೆ. ಜಾತ್ಯಾತೀತ ಮನೋಭಾವದಿಂದಾಗಿ ಎಲ್ಲರಿಗೂ ಮುಕ್ತದ್ವಾರ ತೆರೆದಿರುವ ಶ್ರೀಗಳ ಬಗ್ಗೆ ಅಪಾರ ಭಕ್ತಿ, ಪ್ರೀತಿಗಳು ಭಕ್ತ ಜನರಲ್ಲಿ ಮೈತಳೆದಿವೆ.

ಬೆಂಗಳೂರಿನ ಸಮೀಪದ ಬಾವಂದೂರಿನ ಸುಬೇದಾರ್ ಮನೆತನದ ಚಿಕ್ಕಲಿಂಗಪ್ಪ, ಬೋರಮ್ಮ ದಂಪತಿಗಳ ಸುಪುತ್ರರೇ ಶ್ರೀಗಳು. ಕೃಷಿಯೊಂದಿಗೆ ಭೈರವ ಸೇವೆಗೆ ತಮ್ಮನ್ನು ತೊಡಗಿಸಿಕೊಂಡಿದ್ದ ತಮ್ಮ ಹಿರಿಯರಿಂದ ಜನ್ಮದತ್ತವಾಗಿ ಬಂದ ದೈವಭಕ್ತಿ ಸಮಾಜ ಸೇವಾಸಕ್ತಿಗಳೊಂದಿಗೆ ಸಹಜ ವೈರಾಗ್ಯವೂ ಜೊತೆಗೂಡಿತು. ಕವಿಮನದ ಶ್ರೀಗಳು.

*ರಾಜ್ಯ ಬೇಡೆನಗೆ ಸ್ವರ್ಗಬೇಡೆನಗೆ*
*ಮರುಹುಟ್ಟು ಬೇಡೆನಗೆ ದುಃಖಿತರ ದುಃಖ*
*ನಿವಾರಣೆ ಮಾಡಿದರದುವೆ ಸಾಕೆನಗೆ.*

ಎಂದು ತಮ್ಮ ಮನೋಭೀಷ್ಟೆಯನ್ನು ಕವಿತೆಯಲ್ಲಿ ಹರಿಸಿದ್ದಾರೆ. ಅದಕ್ಕೆ ತಕ್ಕಂತೆ ನಡೆದು ಬರುತ್ತಿದ್ದಾರೆ.

ಬಿ. ಎಸ್ಸಿ ಪದವೀಧರರೂ, ಸಂಸ್ಕೃತ ಜ್ಞಾನಿಗಳೂ, ಸಾಹಿತ್ಯಾಸಕ್ತರೂ, ಸುಸಂಸ್ಕೃತರೂ, ಸಹೃದಯರೂ, ಮಹಾತ್ವಾಕಾಂಕ್ಷಿಗಳೂ ಆದ ಶ್ರೀಗಳು ಪೀಠಾಧಿಪತಿಗಳಾದಾಗ ಮಠದಲ್ಲಿ ಹಣಕಾಸಿನ ಮುಗ್ಗಟ್ಟು ತೀವ್ರವಾಗಿತ್ತು. ಧೃತಿಗೆಡದ ಶ್ರೀಗಳು ಬೀಳು ಭೂಮಿಯನ್ನೇ ಕೃಷಿಗೆ ಅನುವು ಮಾಡಿದರು. ಸಾಲ ಸೋಲಗಳನ್ನು ತೀರಿಸಲು ಕೃಷಿ ಮತ್ತು ಹೈನುಗಾರಿಕೆಯನ್ನು ಅಭಿವೃದ್ಧಿಪಡಿಸಿದರು. ಬೆವರು ಹರಿಸಿ ದುಡಿದು ಬರಿದಾದ ಉಗ್ರಾಣ ಧವಸ ಧಾನ್ಯಗಳಿಂದ ತುಂಬುವಂತೆ ಮಾಡಿದರು. ಸಡಿಲವಾದ ಆಡಳಿತವನ್ನು ಸುವ್ಯವಸ್ಥಿತಗೊಳಿಸಿದರು. ಎಂತಹ ಜಟಿಲ ಸಮಸ್ಯೆಗಳೇ ಎದುರಾದರೂ ವಿಚಲಿತರಾಗದ ಸ್ಥಿತಪ್ರಜ್ಞರು ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರು. ಏನೆಲ್ಲಾ ಸಮಸ್ಯೆಗಳು ಎದುರಾದರೂ ಅವುಗಳನ್ನು ಧೈರ್ಯವಾಗಿ ಎದುರಿಸುವ ಧೃಡಮನದ ಶ್ರೀಗಳು ಶ್ರೀಮಠದ ಸಮಗ್ರ ಪುನರುಜ್ಜೀವನಕ್ಕೆ ಕಟಿಬದ್ಧರಾಗಿ ನಿಂತರು. ಅವರ ಕರೆಗೆ ಓಗೊಟ್ಟು ಹೊರ್ಯ್‌ಗಯ್ಯಾಗಿ ಅವರೊಂದಿಗೆ ನಿಂತರು ಅವರ ಭಕ್ತಾಭಿಮಾನಿಗಳು. ಹೀಗಾಗಿ ಇಂದು ಶ್ರೀಗಳ ಮಹತ್ವಾಕಾಂಕ್ಷೆಗಳೆಲ್ಲವೂ ಕ್ರಮೇಣ ಸಾಕಾರಗೊಳ್ಳುವಂತಾಗಿದೆ.

ಬೇಸಾಯ, ಗೊಬ್ಬರ, ಹಾಲಿಗೆ ಅನುಕೂಲವಾಗುವಂತೆ ದನಕರುಗಳನ್ನು ಕಲೆಹಾಕಿ ಗೋಶಾಲೆಯನ್ನು ಕಟ್ಟಿಸಿದರು. ಯಾತ್ರಿಕರಿಗೆ ವಸತಿಗೃಹಗಳನ್ನು ನಿರ್ಮಿಸಿದರು. ಸಾಮೂಹಿಕ ಭೋಜನ ಮಾಡಲು ವಿಶಾಲವಾದ, ಬೃಹತ್ತಾದ ಅನ್ನದಾನಿ ಭೈರವ ನಿಲಯ ಮತ್ತು ಅನ್ನಪೂರ್ಣೇಶ್ವರಿ ನಿಲಯಗಳನ್ನು ಅಣಿಗೊಳಿಸಿದರು. ಇಲ್ಲಿ ನಿತ್ಯ ಅನ್ನದಾಸೋಹವಿದೆ. ಚೌಲಶಾಲೆ (ಮುಡಿಕಟ್ಟೆ) ಶೌಚಾಲಯಗಳಿಂದ ಹಿಡಿದು ಯಾತ್ರಿಕರು ಬೆಟ್ಟವೇರಲು ವಿಸ್ತಾರವಾದ ಮೆಟ್ಟಿಲುಗಳು, ಆಯಾಸವಾದಾಗ ಕುಳಿತು ಸುಧಾರಿಸಿಕೊಳ್ಳಲು ವಿಶ್ರಾಂತಿ ಮಂಟಪಗಳು, ಅಗಲವಾದ ಡಾಂಬರು ರಸ್ತೆಗಳನ್ನು ಮಾಡಿಸಿದರು. ಹಳೆಯ ಮಠದ ಕಟ್ಟಡಕ್ಕೆ ಆಧುನಿಕತೆಯ ಬೆಡಗನ್ನು ಬೆರೆಸಿ ಭದ್ರರೂಪ ನೀಡಿದರು. ತೀರಾ ಹಿಂದುಳಿದ ಗ್ರಾಮೀಣ ಪ್ರದೇಶಗಳಲ್ಲೂ ಶಿಕ್ಷಣ ಸೌಲಭ್ಯ ಮತ್ತು ವೈದ್ಯಕೀಯ ಸೌಲಭ್ಯ ನೀಡಿದ ಉದಾರ ಮನಸ್ಸಿನ ಧನ್ಯಜೀವಿಗಳು ಶ್ರೀಗಳು.

*ಶಿಕ್ಷಣದ ಬಾಗಿಲು ತೆರೆದಿರಬೇಕೆಲ್ಲರಿಗೂ*
*ಶೋಷಣೆ ಅಸಮಾನತೆಯ ತೊರೆಯಬೇಕೆಂದಿಗೂ*
*ಸ್ವಾರ್ಥ ನೀಗಲು ಬಾಳಪಯಣ ಸುಗಮವೆಂದೆಂದಿಗೂ*
*ಎಂಬುದು ಶ್ರೀಗಳೇ ತಿಳಿಸಿರುವಂತೆ ಅವರ ನಿಲುವು*

ಗ್ರಾಮೀಣ ಮಕ್ಕಳಿಗೆ ಅತ್ಯುತ್ತಮ ವಿದ್ಯೆ ದೊರಕಿಸಿ ಕೊಡಬೇಕೆಂಬುದು ಅವರ ತೀವ್ರವಾದ ಕಾಳಜಿ. ಬಡತನ, ಮೂಢನಂಬಿಕೆಗಳ ಕಾರಣದಿಂದಾಗಿ ಅನೇಕ ಹಳ್ಳಿಯ ಮಕ್ಕಳು ಶಿಕ್ಷಣದಿಂದ ವಂಚಿತರಾಗುತ್ತಾರೆ. ಅದನ್ನು ನಿವಾರಿಸಿ ಮುಂದಿನ ತಲೆಮಾರಿಗೆ ನಾವು ನೀಡುವ ನಿಡಿದಾದ ಸಂಪತ್ತೆಂದರೆ ವಿದ್ಯೆ ಎಂಬುದನ್ನರಿತು "ಆದಿಚುಂಚನಗಿರಿ ಶಿಕ್ಷಣ ಟ್ರಸ್ಟ್" ನ ಮೂಲಕ ಸುಮಾರು ಇನ್ನೂರ ಅರವತ್ತು ಶಾಲಾಕಾಲೇಜುಗಳು, ವೈದ್ಯಕೀಯ -ತಾಂತ್ರಿಕ ಮಹಾ ವಿದ್ಯಾಲಯಗಳನ್ನು ಶ್ರೀಗಳು ನಡೆಸಿಕೊಂಡು ಬರುತ್ತಿದ್ದಾರೆ.

ಶ್ರೀ ಕ್ಷೇತ್ರದಲ್ಲಿ ಅನುದಿನವೂ ಸಾವಿರಾರು ಮಂದಿಗೆ ಅನ್ನ ಸಂತರ್ಪಣೆಯಿರುತ್ತದೆ. ಸುಮಾರು ಮೂವತ್ತು ಸಾವಿರಕ್ಕೂ ಅಧಿಕ ಕುಟುಂಬಗಳು ಜೀವನ ನಡೆಸಲು ಆಸರೆ ನೀಡಿರುವ ಶ್ರೀ ಮಠ ಧರ್ಮ, ಕಲೆ, ಸಾಹಿತ್ಯಗಳು ಅರಳಿ ನಿಲ್ಲಲು ನೆರಳಾಗಿದೆ.

ಸಂಸ್ಕೃತಿಯ ಬಗ್ಗೆ ನಿಸ್ಪೃಹ ಒಲವಿರುವ ಶ್ರೀಗಳ ನೇತೃತ್ವದಲ್ಲಿ ಸರ್ವಧರ್ಮ ಸಮ್ಮೇಳನ, ಸಂಸ್ಕೃತ ಸಮ್ಮೇಳನ, ಸಂಸ್ಕೃತ ನಾಟಕೋತ್ಸವ, ಉಚಿತ ನೇತ್ರಾ ಶಿಬಿರ, ಸಾಮೂಹಿಕ ವಿವಾಹ, ಮಕ್ಕಳ ಸಮ್ಮೇಳನ, ಅರ್ಚಕರ ಸಮ್ಮೇಳನ, ಸಾಹಿತ್ಯಗೋಷ್ಠಿ, ಜನ ಜಾಗೃತಿ ಶಿಬಿರ, ಮಹಿಳಾ ಜಾಗೃತಿ ಶಿಬಿರಗಳಲ್ಲದೆ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರ ಪಟ್ಟಾಭಿಷೇಕಕೋತ್ಸವದ ನಿಮಿತ್ತ ಮೂರು ದಿನಗಳ ಕಾಲ ನಡೆಯುವ ಜಾನಪದ ಕಲಾಮೇಳ ರಾಜ್ಯಮಟ್ಟದಲ್ಲಿ ಅತ್ಯಂತ ಭರ್ಜರಿಯಾಗಿ ನಡೆಯುತ್ತದೆ. ಆ ಸಂದರ್ಭದಲ್ಲಿ ಪ್ರದರ್ಶಿತಗೊಳ್ಳುವ ವೈವಿಧ್ಯಮಯ ಜನಪದ ಕಲೆಗಳು, ಹಾಡುಕುಣಿತಗಳು ನೋಡುವವರ ಮನಸ್ಸನಲ್ಲಿ ಅಚ್ಚೊತ್ತಿ ನಿಲ್ಲುತ್ತವೆ. ತಮ್ಮ ಪಟ್ಟಾಭಿಷೇಕೋತ್ಸವವನ್ನು ಜಾನಪದ ಸಂಸ್ಕೃತಿಯ ಪುನರುಜ್ಜೀವನಗೊಳಿಸುವ ಮುಖೇನ ಅರ್ಥಪೂರ್ಣಗೊಳಿಸಿ ಕೊಂಡಿರುವ ಹಿರಿಮೆ ಶ್ರೀಗಳದು.

ಶಿಥಿಲವಾದ ಅನೇಕ ವಿದ್ಯಾಸಂಸ್ಥೆಗಳನ್ನು ದತ್ತು ತೆಗೆದುಕೊಂಡಿರುವ ಶ್ರೀಮಠದ ಆಶ್ರಯದಲ್ಲಿ ಅಬಲಾಶ್ರಮ, ವೃದ್ಧಾಶ್ರಮಗಳಿದ್ದು ವಯಸ್ಸಾದವರಿಗೆ, ಆಶ್ರಯವಿಲ್ಲದವರಿಗೆ, ನೋವುಂಡವರಿಗೆ, ದಿಕ್ಕುದೆಸೆಯಿಲ್ಲದವರಿಗೆ ನೆಮ್ಮದಿಯ ಬಾಳನ್ನು ನೀಡಿವೆ. ಅನಾಥ ಮಕ್ಕಳಿಗೆ ಹಾಗೂ ಅಂಧ ಮಕ್ಕಳಿಗೆ ಉಚಿತ ವಸತಿ ಶಾಲೆಗಳಿದ್ದು ಅವರೂ ಬಾಳದಾರಿಯನ್ನು ರೂಪಿಸಿಕೊಳ್ಳಲು ಇಂಬಾಗಿವೆ. ಅಂಧ ಮಕ್ಕಳಿಗೆ ವೃತ್ತಿ ತರಬೇತಿ ನೀಡುವ ವ್ಯವಸ್ಥೆ ಅನುಕೂಲಕರವಾಗಿದೆ.

ಬೆಳ್ಳೂರಿನ ಸಮೀಪ, ಬೆಂಗಳೂರು-ಮಂಗಳೂರು ಹೆದ್ದಾರಿಯಲ್ಲಿರುವ ಇನ್ನೂರೈವತ್ತು ಎಕರೆ ಪ್ರದೇಶದಲ್ಲಿ ಸಕಲ ಅನುಕೂಲಗಳನ್ನು ಒಳಗೊಂಡ ಯೋಜನಾಬದ್ಧ 'ಬಾಲಗಂಗಾಧರನಾಥ ನಗರ'ದಲ್ಲಿ ವೈದ್ಯಕೀಯ ಕಾಲೇಜು, ಅದರ ಪಕ್ಕದಲ್ಲೇ" ಶ್ರೀ ಆದಿಚುಂಚನಗಿರಿ ಆಸ್ಪತ್ರೆ ಮತ್ತು ಸಂಶೋಧನಾ ಕೇಂದ್ರ', ಕಲ್ಪತರು ಭವನವೆಂಬ ಸುಂದರ ಅತಿಥಿಗೃಹ, ಸಿಬ್ಬಂದಿ ವಸತಿಗೃಹಗಳು, ಹುಡುಗರು ಹಾಗೂ ಹುಡುಗಿಯರ ಪ್ರತ್ಯೇಕ ವಿದ್ಯಾರ್ಥಿನಿಲಯಗಳು, ವಾಣಿಜ್ಯ ಸಂಕೀರ್ಣ, ಸಾಲು ಮರದ ರಸ್ತೆಗಳು, ಆಸ್ಪತ್ರೆ -ಕಾಲೇಜುಗಳ ಮುಂದಿರುವ ಸಸ್ಯಸಂಕುಲದಿಂದ ಹಸಿರು ಚೆಲ್ಲುವ ಸೊಬಗಿನ ಉದ್ಯಾನವನಗಳು, ಲಕ್ಷಣವಾದ ಗಣಪತಿ ದೇವಾಲಯ-ಇವೆಲ್ಲದರ ನಡುವೆಯೂ ಮನಸ್ಸಿಗೆ ಪ್ರಫುಲ್ಲವೆನಿಸುವ ಪ್ರಶಾಂತತೆ ಎಂತಹವರಿಗೂ ಹಿಡಿಸುತ್ತದೆ. "ಆದಿಚುಂಚನಗಿರಿ ಆಸ್ಪತ್ರೆ" ಅಮೇರಿಕದ ಮಾದರಿಯಲ್ಲಿ ನಿರ್ಮಾಣಗೊಂಡ ಅತ್ಯಾಧುನಿಕ ವೈದ್ಯಕೀಯ ಸೌಲಭ್ಯಗಳಿಂದೊಡಗೂಡಿದ ಉತ್ಕೃಷ್ಟ ಮಟ್ಟದ ಆಸ್ಪತ್ರೆ, 'ಇಂತಹ ಆಸ್ಪತ್ರೆಯನ್ನು ಶ್ರೀ ಬಾಲಗಂಗಾಧರ ನಾಥ ಸ್ವಾಮೀಜಿ ಯವರು ಬೆಂಗಳೂರಿನಲ್ಲಿ ಕಟ್ಟಿಸಿದ್ದರೆ ಹಣದ ಹೊಳೆ ಹರಿಯುತ್ತಿತ್ತು.' ಎಂದು ಒಮ್ಮೆ ಭಕ್ತರು ಕೆಲವರು ಹೇಳಿದಾಗ " ಹಳ್ಳಿಯವರಿಗೆ ಒಳ್ಳೆಯ ಆಸ್ಪತ್ರೆ, ಔಷಧಿ ದೊರಕಬೇಕೇ ಹೊರತು ಬೇರೆ ಏನು ನನಗೆ ಬೇಕಿಲ್ಲ" ಎಂದ ಶ್ರೀಗಳು ಗ್ರಾಮೀಣ ಜನತೆಯ ಸಮಸ್ಯೆಗಳನ್ನು ಚೆನ್ನಾಗಿ ಅರಿತು ಗ್ರಾಮೋದ್ಧಾರದ ತ್ತಲೇ ತೀವ್ರ ಗಮನಹರಿಸಿದ್ದಾರೆ. 'ಸೇವೆಯೇ ಪೂಜೆ' ಎಂದ ನಂಬಿ ನಡೆಯುತ್ತಿರುವ ಅವರು ಈ ಯುಗದ ಪರಮ ಆದರ್ಶ ಸನ್ಯಾಸಿ ಎಂದರೆ ತಪ್ಪಾಗದು.

ಮುಂದುವರಿಯುವುದು.

ಲೇಖಕ : ಡಾ. ಕೆ. ರಾಜೇಶ್ವರಿ ಗೌಡ

---

ಒಬ್ಬನ ಗುರಿಯನ್ನರಿತೇ ಅವನು ಎಂತವನೆಂಬುದನ್ನು ಹೇಳಬಹುದು.

# ಗೌಡ ಜನಾಂಗದ, ಕುಟುಂಬ ಪದ್ಧತಿ ಮತ್ತು ಸಂಸ್ಕೃತಿಯ ಕಿರು ಪರಿಚಯ.

ಸಾವಿರಾರು ವರ್ಷಗಳ ಕಾಲ ಪ್ರವಾಹದಲ್ಲಿ ಅನೇಕ ಸಂಸ್ಕೃತಿಗಳು ನಾಶವಾದುವು. ಇದಕ್ಕೆ ಮೂಲ ಕಾರಣ ಇಸ್ಲಾಂ ಮತ್ತು ಕ್ರೈಸ್ತಮತಗಳ ದಾಳಿಯಿಂದ ಅನೇಕ ದೇಶಗಳು ಮತಾಂತರಗೊಂಡವು. ಭಾರತದಲ್ಲಿಯೂ ದೊಡ್ಡ ಗುಂಪಿನ ಮತಾಂತರವಾಯಿತು. ಸಹಸ್ರಾರು ಮಠ ಮಂದಿರಗಳು ಶ್ರದ್ಧಾ ಕೇಂದ್ರಗಳು ನಾಶವಾದವು. ಪ್ರಜ್ಞಾವಂತ ಶಿಸ್ತಿನಿಂದ ಕೂಡಿದ ಪ್ರಾಮಾಣಿಕ, ನಿಸ್ವಾರ್ಥಪ್ರಜೆಗಳು ಕಷ್ಟಕ್ಕೊಳಗಾದರು. ಗೌಡ ಜನಾಂಗದವರು ಸ್ವಾರ್ಥಿಗಳು, ಅಪ್ರಮಾಣಿಕರು ಅಲ್ಲ. ಯಾವ ಜನಾಂಗವನ್ನು ಒಡೆಯುವ ಉದ್ದೇಶವುಳ್ಳ ಜನಾಂಗವಲ್ಲ. ಆಯ ಕಟ್ಟಿನ ಸ್ಥಳಗಳಲ್ಲಿ ಕುಳಿತು ಅಲ್ಲಿ ದೊರೆಯುವ ಹಣವನ್ನು ಸೌಲಭ್ಯಗಳನ್ನು ದುರ್ಬಳಕೆ ಮಾಡುವ ಜನಾಂಗವಲ್ಲ. ಗೌಡ ಜನಾಂಗದ ಮೂಲ ಆರ್ಯಾ ವರ್ತದಿಂದ ಬಂದ ಆರ್ಯ ರೈತರು. ಆರ್ಯಾವರ್ತ ಪ್ರತಿಯೊಬ್ಬ ಭಾರತೀಯನಿಗೂ ಅತೀ ಪವಿತ್ರವಾದ ಸ್ಥಳ. ಭಾರತೀಯರಿಗೆ ಕಾಶಿ ಎಷ್ಟು ಪವಿತ್ರವಾದ ಸ್ಥಳವೋ ಅಷ್ಟೇ ಪವಿತ್ರವಾದ ಸ್ಥಳ ಆರ್ಯಾವರ್ತ. ನಮ್ಮ ಅತೀ ಪವಿತ್ರ ನಾಲ್ಕು ಗ್ರಂಥಗಳಾದ ಋಗ್ವೇದ, ಯುಜುರ್ವೇದ, ಅಥರ್ವ ವೇದ, ಸಾಮವೇದಗಳನ್ನು ಬರೆದ ಸ್ಥಳ ಆರ್ಯಾವರ್ತ. ಈ ನಾಲ್ಕು ವೇದಗಳ ಸಾರವನ್ನು ಹೀರಿದ ಭಾರತೀಯರು ಪುಣ್ಯ ಪುರುಷರು. ಆರ್ಯವರ್ತದಿಂದ ಪಲಾಯನ ಗೈದ ಆರ್ಯರೈತ ಗೌಡ ಜನಾಂಗದವರು ಆಲಸಿ ಮನೋಭಾವದವರಲ್ಲ. ಏನನ್ನಾದರೂ ಮಾಡಲು ಯೋಚಿಸುತ್ತಾರೆ. ಮನ ಮನೆಗಳನ್ನು ಬೆಳಗಿಸಿ ಜನಮನದಲ್ಲಿ ಅದು ಜೀವನೋತ್ಸಾಹವನ್ನು ಉಕ್ಕಿಸಿ, ವಿವೇಕವನ್ನು ಬೆಳಗಿಸಿ ಸುಮ್ಮನೆ ಬದುಕಿದರೆ ಸಾಲದು, ಚೆನ್ನಾಗಿ ಬದುಕಬೇಕು. ನಾನೊಬ್ಬನೇ ಬದುಕಿದರೆ ಸಾಲದು. ಇತರರನ್ನು ಬದುಕಗೊಡಬೇಕು ಎಂಬ ಉದಾತ್ತ ಪ್ರಜೆಯನ್ನು ಅರಳಿ ಸುವವನು.

ಆಚಾರಬೇಕು, ಪದ್ಧತಿಗೆ ವಿಚಾರಬೇಕು, ವಿಜ್ಞಾನಕ್ಕೆ ಗೌಡ ಜನಾಂಗದ ಪದ್ಧತಿ ವಿಶಿಷ್ಟವಾಗಿದೆ. ಅತಿಥಿಗಳು ಮನೆಗೆ ಬಂದಾಗ ಅವರಿಗೆ ಚೆಂಬಿನಲ್ಲಿ ನೀರು ಕೊಡುವ ಪದ್ಧತಿ ಇದೆ. ಕೈ ಕಾಲು ತೊಳೆದು ಆದ ನಂತರ ಹಿರಿಯರ ಕಾಲು ಮುಟ್ಟಿ ನಮಸ್ಕರಿಸಬೇಕು. ನಂತರ ತಟ್ಟೆಯಲ್ಲಿ ವೀಳ್ಯ ಇಡುವ ಶಾಸ್ತ್ರ ಇದೆ. ನಂತರ ಅತಿಥಿ ಸತ್ಕಾರ. ಮದುವೆ ಸಮಾರಂಭದಲ್ಲಿ ಮದು ಮಗ ಮದು ಮಗಳಿಗೆ ಸೋದರ ಮಾವ ಕಾಸ್ ತಾಳಿ ಕಟ್ಟುವ ಕ್ರಮ ಇದೆ. ಇದು ಸೋದರ ಸಂಬಂಧದ ಪವಿತ್ರ ಕಾರ್ಯ. ಸೇವೆಯೇ ಸಾರ್ಥಕತೆಗೆ ಸೇತುವೆ. ಮದುವೆಯಲ್ಲಿ ವಧು ವರರ ಮೈಗೆ ಎಣ್ಣೆ ಅರಸಿನ ತಿಕ್ಕಿ ಐದು ಅಥವಾ ಏಳು ಇಲ್ಲವೆ ಒಂಭತ್ತು ಮುತ್ತೈದೆಯರು ಎಣ್ಣೆ ಅರಸಿನ ಶಾಸ್ತ್ರ ಮಾಡುತ್ತಾರೆ. ಇದು ಅನಾದಿಕಾಲದಿಂದಲೂ ನಡೆದು ಕೊಂಡೆ ಬಂದಿದೆ. ಈ ಎಣ್ಣೆ ಅರಿಸಿನ ಮಿಶ್ರಿತ ಶಾಸ್ತ್ರದಿಂದ ವಧು ವರರ ಬಾಳು ಬಂಗಾರದಂತೆ ಬೆಳಗಲಿ ಎಂಬ ಉದ್ದಿಶ್ಯದಿಂದ ಕೂಡಿದೆ. ದಾಂಪತ್ಯ ಜೀವನಕ್ಕೆ ಕಾಲಿಟ್ಟು, ದಂಪತಿಗಳ ಸೇವಾ ಕಾರ್ಯ ಉತ್ತಮವಾಗಲಿ, ಬಾಳು ಬಂಗಾರವಾಗಲೆಂದೇ ಸೇರಿದ ಕುಲಸ್ಥರ ಪ್ರಾರ್ಥನೆ. ಇದಕ್ಕೆ ಮೂಲ ಸೂತ್ರ ಹತ್ತು ಕುಟುಂಬ ಹದಿನೆಂಟು ಗೋತ್ರ. ಗೋತ್ರದ ಮೂಲಸ್ಥಳ ಆರ್ಯಾವರ್ತ. ನಾಲ್ಕು ವೇದಗಳಲ್ಲಿ ಒಂದಾದ ಅಥರ್ವ ವೇದದಲ್ಲಿ ಗೋತ್ರದ ಮೂಲ ತಿಳಿಯುತ್ತಿದೆ. ಇದರಿಂದ ನಮ್ಮ ಮೂಲ ಆರ್ಯಾವರ್ತ, ಆರ್ಯಾವರ್ತದಿಂದ ಬಂದ ಆರ್ಯ ರೈತರು. ಗೌಡ ಜನಾಂಗದಲ್ಲಿ ಅನಾದಿಕಾಲದಿಂದ ನಡೆದು ಬಂದ ಒಂದು ಪವಿತ್ರ ಮಾತು ಇದೆ. ಹೆಂಡತಿ ಗೃಹಿಣಿಯಾದರೆ ಗಂಡ ಗೃಹಸ್ತ. ಹೆಂಡತಿ ಗರ್ತಿಯಾದರೆ ಗಂಡ ಗೌಡ. ಹೆಂಡತಿ ಒಡತಿಯಾದರೆ ಗಂಡ ಒಡೆಯ. ಹಾಗಾದರೆ ಗೌಡ ಎಂಬ ಪದದ ಮೂಲ ಯಾವುದು? ಪರಕೀಯರ ದಾಳಿಯಿಂದ ಹೊರ ಬಿದ್ದ ಆರ್ಯರು ಸಿಂದ್ ಹೈದರಾ ಬಾದಿನಿಂದ (ಆರ್ಯಾವರ್ತದ ಮೂಲ ಗುಜರಾತ್, ರಾಜಾಸ್ಥಾನ, ಮಧ್ಯ ಪ್ರದೇಶ, ಉತ್ತರ ಪ್ರದೇಶಕ್ಕೆ ವಲಸೆ ಹೋದರು. ಉತ್ತರ ಪ್ರದೇಶದಲ್ಲಿ ಇವರ ಮುಖ್ಯ ಕಸುಬು ವ್ಯವಸಾಯ. ಆರ್ಯರೈತರು ಬತ್ತ ವ್ಯವಸಾಯದ ಜೊತೆಗೆ ಕಬ್ಬು ಬೆಳೆಯುತ್ತಿದ್ದರು. ಬೆಳೆದ ಕಬ್ಬಿನಿಂದ ಬೆಲ್ಲ ತಯಾರು ಮಾಡುತ್ತಿದ್ದರು. ಬೆಲ್ಲವನ್ನು ಮಾರಾಟ ಮಾಡಲು ಆಗಿನ ಕಾಲದಲ್ಲಿ ಗಂಡಸರು ತಲೆ ಹೊರೆಯಲ್ಲಿ ಮನೆ ಮನೆಗೆ ಹೋಗುತ್ತಿದ್ದರು. ಅಂದು ಇಂದಿನಂತೆ ಅಂಗಡಿಗಳಲ್ಲಿ ಮಾರಾಟ ಮಾಡುವ ವ್ಯವಸ್ಥೆ ಇರಲಿಲ್ಲ. ದೂರದಲ್ಲಿ ಬೆಲ್ಲ ಹೊತ್ತು ಕೊಂಡು ಹೋಗುವ ವ್ಯಕ್ತಿಯನ್ನು ನೋಡಿದ "ವ್ಯಕ್ತಿಯನ್ನು" ಮನೆಯವರು ಎಗೂಡ್ ಇದರೆ ಅವೋ ಎಂದು ಕೂಗಿ ಕರೆಯುತ್ತಿದ್ದರು. ಕೆಲವೊಮ್ಮೆ ಹೆಣ್ಣು ಮಕ್ಕಳು ತಲೆ ಹೊರೆಯಲ್ಲಿ ಬೆಲ್ಲ ಹೊತ್ತು ಕೊಂಡು ಹೋದಾಗಲೂ ಎ ಗೂಡ್ ಇದರ್ ಅವೋ ಎಂದು ಕರೆಯುತ್ತಿದ್ದರು. ಈ ಆರ್ಯ ರೈತರು ನಂತರದ ಪರಕೀಯರ ದಾಳಿಯಿಂದ ತೊಂದರೆಗೀಡಾಗಿ ಉತ್ತರ ಪ್ರದೇಶದಿಂದ ಬಂಗಾಳಕ್ಕೆ ವಲಸೆ ಹೋದರು. ಅಲ್ಲಿಯೂ ಬಹಳ ಕಾಲ ಆರ್ಯರೈತರಿಗೆ ಉಳಿಯಲು ಆಗಲಿಲಿಲ. ಇದಕ್ಕೂ ಕಾರಣ ಪರಕೀಯರ ಧಾಳಿ. ಪಶ್ಚಿಮ ಬಂಗಾಳದಲ್ಲಿ ಇಂದೂ ಗೌಡ ಬಂಗಾಳಿಗಳು ಇದ್ದಾರೆ. ಉತ್ತರ ಪ್ರದೇಶದಲ್ಲಿ ಈಗಲೂ ಹೆಣ್ಣು ಮಕ್ಕಳು ಋತುವಾದರೆ ಋತು ಶಾಂತಿ ಕಾರ್ಯಕ್ರಮ ನಡೆಯುತ್ತಿದೆ. ಕೊಡಗಿನಲ್ಲೂ ಈ ಋತು ಶಾಂತಿ ಕಾರ್ಯಕ್ರಮ ಗೌಡ ಜನಾಂಗದಲ್ಲಿ ರೂಢಿಯಲ್ಲಿತ್ತು. ಕೆಲವೊಮ್ಮೆ ಅಪರೂಪಕ್ಕೆ ಇದೆ. ಆದರೆ ಈಗ ಆ ಪದ್ಧತಿಯನ್ನು ನಿಲ್ಲಿಸಲಾಗಿದೆ. ಆರ್ಯರೈತರು ಬಂಗಾಳದಿಂದ ಬಿಹಾರ್, ಒರಿಸ್ಸಾ ರಾಜ್ಯಗಳನ್ನು ದಾಟಿ ಮುಂದೆ ವಿಜಯನಗರ ಸಂಸ್ಥಾನಕ್ಕೆ ವಲಸೆ ಬಂದರು. ಅಲ್ಲಿ ಗೂಡ್ ಎಂಬ ಪದ ಮುಂದೆ ಗೌಡ್ ಆಗಿ ಗೌಡ ಆಯಿತು. ಅದೇ ರೀತಿ ಹೆಣ್ಣು ಮಕ್ಕಳನ್ನು ಗೂಡೆ ಎಂದು ಕರೆಯುತ್ತೇವೆ. ಪಶ್ಚಿಮ ಬಂಗಾಳದಲ್ಲಿ

---

ಇಂದೂ ಸಹ ಗೌಡ ಬಂಗಾಳಿಗಳು ಇದ್ದಾರೆ. ಪಶ್ಚಿಮ ಬಂಗಾಳದಿಂದ ಬಂದ ಆರ್ಯ ರೈತರನ್ನು ಆಂಧ್ರ ಪ್ರದೇಶದಲ್ಲಿ ಇಂದು ರೆಡಿ ಎಂದು ಕರೆಯುತ್ತಾರೆ.ಇವರು ರೆಡ್ಡಿ ಜನಾಂಗದವರು. ತಮಿಳುನಾಡಿನಲ್ಲಿ ಆರ್ಯ ರೈತರನ್ನು ಇಂದು ಗೌಂಡರ್ ಎಂದು ಕರೆಯುತ್ತಾರೆ. ಇವರು ತಮಿಳು ನಾಡಿನ ನೀಲಗಿರಿ ಮತ್ತು ಕೊಯಮುತ್ತೂರು ಭಾಗಗಳಲ್ಲಿ "ಗೌಂಡರ್" ಜಾತಿ ಆಗಿದೆ. ಅವರು ಕೊಡಗಿನ ಗೌಡರಂತೆ ಒಕ್ಕಲುತನ ಹಾಗೂ ಭೂ ಹಿಡುವಳಿ ಇರುವ ಕ್ಷತ್ರಿಯರಾಗಿರುವರು.

ಕರ್ನಾಟಕದ ಬಯಲು ಪ್ರದೇಶದಲ್ಲಿರುವ ವಕ್ಕಲಿಗ ಗೌಡರು, ದಕ್ಷಿಣ ಕನ್ನಡ ಮತ್ತು ಕೊಡಗಿನಲ್ಲಿರುವ ಆರ್ಯ ರೈತರನ್ನು ಗೌಡ ಎಂದು ಕರೆಯುವರು. ಮಾಕೋನಹಳ್ಳಿ ದೊಡ್ಡಪ್ಪಗೌಡರು ಆರ್ಯವರ್ತದಿಂದ ದಕ್ಷಿಣಕ್ಕೆ ಬಂದ ಚೇರರು ಎಂದು ಹೇಳಿದ್ದಾರೆ. ತಮ್ಮ ಸಂಸ್ಕೃತಿಯ ಪ್ರತೀಕವಾಗಿ ಗೌಡ ಎಂಬ ಹೆಸರಿನಿಂದಲೇ ಇಂದಿಗೂ ಉಳಿದು ಬಂದಿದ್ದಾರೆ. ಕಲ್ಯಾಣ ಚಾಲುಕ್ಯ ಚಕ್ರವರ್ತಿ ಸೋಮ ಶೇಖರನ ಮಗ ವಿಕ್ರಮಾದಿತ್ಯ ಪ್ರಭು ಮಲ್ಲ ಕ್ರಿ. ಶ. 1076-1126 ಬಂಗಾಳದ ಗೌಡ ರಾಜ್ಯ ಮತ್ತು ಅಸ್ಸಾಂಗಳನ್ನು ಗೆದ್ದಂತೆ ಉಲ್ಲೇಖವಿದೆ. ಗೌಡ ಜನಾಂಗದವರು ಅಜ್ಞಾನ ಮಾರ್ಗವನ್ನು ತೊರೆದು ಕರ್ಮ ಮಾರ್ಗದತ್ತಲೇ ನಡೆಯುತ್ತಿದ್ದಾರೆ. ಕೊಡಗಿನಲ್ಲಿ ಗೌಡ ಜನಾಂಗದವರು ಹೆಚ್ಚು ಕಡಿಮೆ 8 ಅಥವಾ 9 ನೇ ಶತಮಾನದಲ್ಲಿ ಇದ್ದರೆಂದು ಹೇಳಬಹುದಾಗಿದೆ. ಕೆಲವು ಘಟಕಗಳ ಲೆಕ್ಕಾಚಾರದ ಪ್ರಕಾರ 13/14 ನೇ ಶತಮಾನದ ನಂತರ ಗೌಡರ ಪ್ರಭಾವ ಕೊಡಗಿನಲ್ಲಿ ಕಾಣಿಸುತ್ತದೆ. ಕೊಡಗರ ನಂತರ ಕೊಡಗಿನಲ್ಲಿ ಪ್ರಬಲ ಜನಾಂಗದವರೆಂದರೆ "ಗೌಡರು". ಊರಿಗೊಬ್ಬ ಗೌಡ, ದೇಶಕ್ಕೊಬ್ಬ ದೊರೆ" ಇದು ಹಿರಿಯ ಗೌಡ ಜನಾಂಗದ ನಾಣ್ಣುಡಿ. ಜನ ಸಂಖ್ಯೆಯನ್ನು ಗಮನಿಸಿದರೆ ಕೊಡಗಿನಲ್ಲಿ ಗೌಡರ ಸಂಖ್ಯೆಯೇ ಜಾಸ್ತಿ. ಗೌಡ ಜನಾಂಗದವರಿಗೆ ಕೊಡಗಿನ ಒಳಗೂ, ಹೊರಗೂ ಅವರದೆ ಸಂಬಂಧಿಸಿದವರು ಇರುವರು. ಗೌಡ ಜನಾಂಗದವರಿಗೆ ದಕ್ಷಿಣ ಕನ್ನಡದಲ್ಲಿಸಂಬಂಧಿಗಳಿದ್ದರೆ, ಬಯಲು ಪ್ರದೇಶದಲ್ಲಿರುವ ಒಕ್ಕಲಿಗ ಗೌಡರು ಮತ್ತೊಂದು ಸಂಬಂಧ ಬೆಳೆಸಿದವರಿದ್ದಾರೆ. ಗೌಡರು ಕೊಡಗಿನಲ್ಲಿ ಮಾತ್ರವಲ್ಲದೆ ತುಳು ನಾಡು, ಮೈಸೂರು, ಚಿಕ್ಕಮಗಳೂರು, ಹಾಸನ, ಮಂಡ್ಯ, ಕಾನೂರು, ತೀರ್ಥಹಳ್ಳಿ, ಆಗುಂಬೆ, ಮೇಗರವಳ್ಳಿ ಮುಂತಾದ ಕಡೆ ಇದ್ದಾರೆ. ಎಲ್ಲಾ ಜನಾಂಗದವರು ಬಾಳು ಚಿತ್ರಿತವಾಗಿರುವುದು.

ಮಲೆನಾಡಿನ ಬಾಳಿನ ಕಡಲಿನಲ್ಲಿ ಒಂದು ಹನಿ. ಹೊರ ಊರಿಗೆ ಹೋಗುವವರು ಅಲ್ಲಿಯ ಜನ ಮತ್ತು ಜೀವನದ ವಿಚಾರವಾಗಿ ತಟಕ್ಕನೆ ಯಾವ ನಿರ್ಣಯಗಳನ್ನೂ ಮಾಡಿಕೊಳ್ಳದೆ ಸ್ವಲ್ಪ ಕಾಲ ತಾಳ್ಮೆಯಿಂದಿದ್ದು ಕ್ರಮೇಣ ಬಳಕೆಯಿಂದ ಜನರನ್ನೂ ಜೀವನವನ್ನೂ ಪರಿಚಯ ಮಾಡಿಕೊಳ್ಳುವಂತೆ ಜನರು ಮುಂದಾಗಬೇಕು. ಸಚ್ಚರಿತೆಯ ಒಂದು ಕಾರ್ಯ ಒಂದು ಟನ್ ಉಪದೇಶಕ್ಕೆ ಸಮ. ಯಾರ ಬದುಕಿನಲ್ಲೇ ಆಗಲಿ ಕೆಲವು ಅನುಭವಗಳೂ, ಒಳ್ಳೆಯ ಘಟನೆಗಳೂ ವಿಶೇಷ ಅಭಿರುಚಿಯನ್ನುಂಟು ಮಾಡುವುದರ ಜೊತೆಗೆ ಚಾರಿತ್ರ್ಯ ನಿರ್ಮಾಣಕ್ಕೆ ಪ್ರೇರಕವಾಗುವಂಥ ಪ್ರಸಂಗಗಳೂ ಹೌದು. ಅಂಥಹ ಪ್ರಸಂಗಗಳನ್ನು ಆಧರಿಸಿ ಯುವಕರಿಗೆ ಸ್ಫೂರ್ತಿ ಮತ್ತು ಮಾರ್ಗದರ್ಶನ ನೀಡಬಲ್ಲ ಮನ ಸೆಳೆಯುವ ಅನೇಕ ಗ್ರಂಥಗಳು ಪಶ್ಚಿಮ ದೇಶಗಳಲ್ಲಿ ಪ್ರಕಟವಾಗಿವೆ. ಆ ಗ್ರಂಥಗಳನ್ನು ಸ್ವಾತಂತ್ರ್ಯ ಪೂರ್ವದಲ್ಲಿ ನಮ್ಮ ದೇಶದ ವಿದ್ಯಾವಂತರು ಓದಿ ಸ್ಫೂರ್ತಿ ಪಡೆದ ವಿಚಾರ ಕೇಳಿದ್ದೇವೆ. ಸ್ಯಾಮ್ಯುಯೆಲ್ ಸ್ಮಾಲ್ಸ್ ಅವರ Self-helf ಸ್ವಸಹಾಯ ಎನ್ನುವ ಬರಹ ಸುಮಾರು 1858 ರಲ್ಲಿ ಪ್ರಕಟವಾಗಿದೆ. ಯುವಕರಿಗೆ ತಮ್ಮನ್ನು ತಿದ್ದಿಕೊಳ್ಳಲು ಬೇಕಾಗಿರುವುದು ಯಥಾರ್ಥ ಆದರ್ಶಗಳು, ಮಾದರಿಗಳು ಮತ್ತು ಯೋಗ್ಯ ಮಾರ್ಗದರ್ಶನ ಒಂದು ರಾಷ್ಟ್ರದ ಉತ್ಸಾಹ ಶಕ್ತಿ ಮತ್ತು ಭರವಸೆಯ ಪ್ರತೀಕವೇ ಯುವಕರು, ಯುವಕರ ಅದಮ್ಯ ಶಕ್ತಿಯನ್ನು ಯೋಗ್ಯ ಮತ್ತು ಉಪಕಾರಕ ಮಾರ್ಗಗಳಲ್ಲಿ ಹರಿಯುವಂತೆ ಮಾಡಲಾಗದಿದ್ದರೆ ನಮ್ಮ ಎಲ್ಲಾ ಯೋಜನೆಗಳೂ ನಿಷ್ಫಲವಲ್ಲವೇ? ಮಕ್ಕಳು ಓದು ಬರಹ ಕಲಿತು ಪರೀಕ್ಷೆ ಪಾಸು ಮಾಡಿ ಧನ ಸಂಪಾದನೆ ಮಾಡಿದರೆ ಶಿಕ್ಷಕರು ಮತ್ತು ರಕ್ಷಕರು ತಾವು ಧನ್ಯರಾದೆವೆಂದು ತಿಳಿಯುವಂತಾಗಿದೆ. ಮಕ್ಕಳು ನಿಜವಾಗಿ ಉದಾತ್ತ ಗುಣಗಳ ಅರ್ಜನೆ ಮಾಡಿ ಯೋಗ್ಯ ಮನುಷ್ಯರಾಗಿ ಮಾತೃಭೂಮಿಯ ಭವಿಷ್ಯವನ್ನು ಜನತೆಯನ್ನು ಜೀವನವನ್ನು ಅಭಿವೃದ್ಧಿ ಪಡಿಸುವರಾಗಬೇಕು. ಭಾರತದಲ್ಲಿ ಹುಟ್ಟಿದ ನಾವು ಎಂತಹ ಭಾಗ್ಯವಂತರು ಎಂದು ತಿಳಿದುಕೊಳ್ಳದೆ ಹೋದರೆ ಎಷ್ಟು ನದಿಗಳ ಕೃಪೆ, ಎಷ್ಟು ಗಣಿಗಳ ಕೊಡುಗೆ, ಎಷ್ಟು ಗಣಿಗಳ ಬೆಳವಣಿಗೆ, ಎಷ್ಟು ಗಿರಿವನಗಳ ಸಂಪತ್ತು ನಮ್ಮದು ಎಂಬುದನ್ನು ನಾವು ಮರೆತಂತಾಗುತ್ತದೆ. ಈ ನಿಟ್ಟಿನಲ್ಲಿ ಸುತ್ತಲೂ ಕತ್ತಲು ಕವಿದಿರುವ ನಮ್ಮ ತಾಯ್ನಾಡನ್ನು ಉಳಿಸಿ ಬೆಳೆಸಲು ಸತತ ಪ್ರಯತ್ನ 106, 07, 79, 747 ಭಾರತೀಯರಿಂದ ಆಗಬೇಕಾಗಿದೆ. ನಮ್ಮೆಲ್ಲರ ಈ ಕರ್ತವ್ಯ ಪ್ರಜ್ಞೆಯನ್ನು ನಮ್ಮ ತಾಯಿ ಎಚ್ಚರಿಸಲಿ. ಭಾರತದ ಮಕ್ಕಳಾಗಿ, ಪ್ರಪಂಚದ ಪ್ರಜೆಗಳಾಗಿ ನಾವು ಸಾರ್ಥಕವಾಗಿ ಬಾಳುವಂತಾಗಲಿ.

ಏನೂ ತಿಳಿಯವರಿಗಿಂತ ಓದಿದವರು ಮೇಲು, ಅವರಿಗಿಂತ ಸ್ಮರಣ ಶಕ್ತಿಯಿರುವವರು ಮೇಲು, ಅವರಿಗಿಂತ ಪರಿಣಿತರು ಮೇಲು, ಅವರಿಗಿಂತ ಅರಿತು ಕೆಲಸ ಮಾಡುವವರು ಮೇಲು.

-ನಂಜುಂಡ ಶಿರಕಜೆ, ಕುಶಾಲನಗರ.

**ಚುಟುಕು**

ನಮ್ಮ ಊರಲ್ಲಿ ಒಬ್ಬ ಹೈದಾ  
ಅಂವ ನೋಡಿಕೆ ಬಹಳ ಪೆದ್ದ್  
ಒಂದು ದಿನ ಕುಡ್ಕಂಡು ಬೈದ  
ಪಕ್ಕಲಿ ಇದ್ದಂವ ಜಾಡಿಸಿ ಒದ್ದ  
ಆಗ ಅಲ್ಲೆ ಮಗುಚಿ ಬಿದ್ದ  
ಅಂವನ ಅಪ್ಪನ ನೋಡಿ ಎದ್ದ  
ಹಂಗೆ ಬುದ್ದಿ ಕಲಿಯಲಿ ಎಂದ

ಕಟ್ರತನ ಯಂ. ದೇವಯ್ಯ. ಮೂಡಿಗೆರೆ

ಜೀವನದ ಗುರಿ ಸಂತಸ ನೆಮ್ಮದಿ ಮಾತ್ರವಲ್ಲ, ನಮ್ಮನ್ನು ಇತರರನ್ನು ಉತ್ತಮರನ್ನಾಗಿಸುವುದು.



# "ಮಹಾ ಮಂತ್ರ"

ಧಾರವಾಹಿ :1

*ಜನಪ್ರಿಯ ಕಾದಂಬರಿಕಾರ 'ಕೌಂಡಿನ್ಯ' ಬರೆದಿರುವ ವಾಮಾಚಾರದ ಹಿನ್ನಲೆಯ ಭಯಾನಕ ಧಾರವಾಹಿ ಕಾದಂಬರಿ.*

*ಮಹಾ ಮಂತ್ರ !*

*ಕೆಲವು ನೂರು ವರ್ಷಗಳ ಹಿಂದೆ ಭೂಗತವಾಗಿರುವ ಮಹಾ ರಹಸ್ಯವನ್ನು ಹೊರತೆಗೆಯುವ ಮಹಾ ಪ್ರಯತ್ನ!*

*ಮೂವರು ಮಾಂತ್ರಿಕರುಗಳ ನಡುವೆ ಮಾಂತ್ರಿಕ ಸ್ಪರ್ಧೆ!*

*ಪ್ರೀತಿಗಾಗಿ ತ್ಯಾಗ ಮಾಡುವ ಅಮರ ಪ್ರೇಮದ ಹೃದಯ ಸ್ಪರ್ಷಿ ಕತೆ! ಮಾಟಕ್ಕೆ ಪ್ರತಿ ಮಾಟ...... ಶಕ್ತಿಗೆ ಪ್ರತಿ ಶಕ್ತಿ ಪ್ರಯೋಗದ ಭಯಾನಕ ಸನ್ನಿವೇಶಗಳ ಸೃಷ್ಟಿ!*

*ಮಾಂತ್ರಿಕ ಸಂಶೋಧನೆ ಹಿನ್ನಲೆಯ ನಿಗೂಢಮಯ ರೋಚಕ ಕಾದಂಬರಿ !*

**ಧಾರವಾಹಿ -1 ಮಹಾ ಮಂತ್ರ - ಕೌಂಡಿನ್ಯ**

ಈ ವಾಮಾಚಾರ ಎಂಬ ಚರ್ಚಾಸ್ಪದ ವಿಚಾರದ ಬಗ್ಗೆ ತಲೆ ತಲಾಂತರಗಳಿಂದ ಅನುಮಾನ ಉಳಿದುಕೊಂಡು ಬಂದಿದೆ. ಸಾಮಾನ್ಯವಾಗಿ ಎಲ್ಲರನ್ನೂ ಕಾಡುವ ಪ್ರಶ್ನೆಗಳು ಎಂದರೆ ವಾಮಾಚಾರ ನಿಜವೆ? ಇದು ಸಾಧ್ಯವೇ?

ನೇರವಾಗಿ ವಾಮಾಚಾರ ನಿಜ........ ಮಾಂತ್ರಿಕ ಶಕ್ತಿಯಿದೆ ಎಂಬುದನ್ನು ವೈಜ್ಞಾನಿಕವಾಗಿ ನಿರೂಪಿಸಲು ಆಗಿಲ್ಲ.

ಪ್ರಯೋಗಗಳಿಗೆ ಇದು ಸಿಕ್ಕಿಲ್ಲ, ಹಾಗಂತ ಸುಳ್ಳಲ್ಲ.

ವಿದ್ಯೆ ಯಾವುದೇ ಆಗಿರಲಿ ಶತ-ಶತಮಾನಗಳಿಂದ ಪ್ರಚಲಿತವಾಗಿ ನಮ್ಮ ಜೊತೆ ಜೊತೆಗೆ ಬಂದಿದೆ ಎಂದರೆ ಅದು ಪೂರ್ತಿಯಾಗಿ ಸುಳ್ಳಾಗಿರಲು ಸಾಧ್ಯವೇ ಇಲ್ಲ.

ವಾಮಾಚಾರ ಇದೆ! ಆದರೆ ಅದನ್ನು ಬರೀ ಉಡಾಫೆಯಿಂದ ಉದಾಸೀನದಿಂದ ತಿಳಿದುಕೊಳ್ಳಲು ಸಾಧ್ಯವೇ ಇಲ್ಲ. ಅದರ ಬಗ್ಗೆ ಸತ್ಯ ಏನು ಎಂದು ತಿಳಿಯಬೇಕಾದರೆ ಶೋಧನೆ ಮಾಡಬೇಕು.

ಸತ್ಯ ಶೋಧನೆ ಮಾಡಬೇಕು ಅಥರ್ವಣ ವೇದದ ಕಾಲದಿಂದಲೂ ಈ ಮಂತ್ರ ವಿದ್ಯೆಯ ಬಗ್ಗೆ ಉಳಿದು ಕೊಂಡು ಬಂದಿವೆ

ಮಂತ್ರ ಶಕ್ತಿ ನಿಜ! ಎಷ್ಟೋ ಲೋಕ ಸಾಧಕರು ಈ ಮಂತ್ರ ಶಕ್ತಿ ವಾಮಾಚರ ಇದೆ ಎಂಬುದನ್ನು ನಿರೂಪಿಸಿದ್ದಾರೆ.

ವಾಮಾಚಾರ ಪರಮ ಪವಿತ್ರವಾದ ವಿದ್ಯೆ. ಅದು ಇರುವುದು ಲೋಕದ ಕಲ್ಯಾಣಕ್ಕಾಗಿ. ಆದರೆ ಕೆಲವು ದುಷ್ಟರು ಅದನ್ನು ಸ್ವಾರ್ಥಕ್ಕಾಗಿ ಉಪಯೋಗಿಸಿಕೊಂಡು ಬೇರೆಯವರಿಗೆ ತೊಂದರೆ ನೀಡಿ ಲೋಕ ಕಂಟಕರಾಗುತ್ತಾರೆ.

ಬಹತೇಕ ಮಾಂತ್ರಿಕರು ತಾವು ಸಾಧನೆ ಮಾಡಿರುವ ಮಾಂತ್ರಿಕ ವಿದ್ಯೆಯನ್ನು ದುರುಪಯೋಗ ಪಡಿಸಿಕೊಂಡು ಲೋಕ ಕಂಟಕರಾಗಿರುವುದರಿಂದಲೇ ಅವರು ಅವನತಿ ಹೊಂದಿದ್ದಾರೆ.

ಮಾಂತ್ರಿಕರು ಕೆಟ್ಟ ಉದ್ದೇಶದಿಂದ ಮಾಂತ್ರಿಕ ವಿದ್ಯೆಗಳನ್ನು ಪ್ರಯೋಗ ಮಾಡಿ ಮಾನವ ಕಂಟಕರಾಗಿದ್ದಾರೆ.

ಈ ಕಾದಂಬರಿಯಲ್ಲಿ ಅಳವಡಿಸಿಕೊಂಡಿರುವ ಕಥಾವಸ್ತು ತುಂಬಾ ಅಪರೂಪವಾದದ್ದು. ಪ್ರಕೃತಿ ನಿಯಮಕ್ಕೆ ವಿರೋಧವಾಗಿರುವ ಸೃಷ್ಟಿಯ ಮಹಾ ರಹಸ್ಯವೊಂದು ತೀಕಾ ಆಕಸ್ಮಿಕವಾಗಿ ಎರಡು ತಲೆಗಳ ಹಿಂದಿನ ಮಾಂತ್ರಿಕನಿಗೆ ತಿಳಿಯುತ್ತದೆ.



ಶ್ರೀ ವೈ. ಎನ್. ನಾಗೇಶ್ ರವರು ಹಾಸನ ಜಿಲ್ಲೆಯ ಹೊಳೆನರಸೀಪುರದವರು. ಇವರು "ಕೌಂಡಿನ್ಯ" ನಾಮಧೇಯದಲ್ಲಿ ಕಾದಂಬರಿ ಲೋಕಕ್ಕೆ ಚಿರಪರಿಚಿತರು. ಕರ್ನಾಟಕದ ಎಲ್ಲಾ ಮುಖ್ಯ ಪತ್ರಿಕೆಗಳಲ್ಲಿ ಹಲವಾರು ಧಾರವಾಹಿಗಳು ಬಂದಿವೆ ಹಾಗೂ ಬರುತ್ತಲಿವೆ. "ಸರ್ಪಗಂಧ" ಕಾದಂಬರಿಯು ಈ ಹಿಂದೆ ಕೊಡಗು ಸಂಗಾತಿಯಲ್ಲಿ 36 ಸಂಚಿಕೆಗಳಲ್ಲಿ ಪ್ರಕಟವಾಗಿ ಓದುಗರಿಂದ ಪ್ರಶಂಶಿಸಲ್ಪಟ್ಟಿತು. ಈಗ ನೀಡುತ್ತಿರುವ "ಮಹಾ ಮಂತ್ರ" ಕೌಂಡಿನ್ಯರವರ 201 ನೇ ಕಾದಂಬರಿಯಾಗಿದೆ. ಓದುಗರ ಮಹಾ ಅಭಿಲಾಷೆ ಈಡೇರಿಸಲು ನಿಮಗಿದೋ ಇನ್ನೊಮ್ಮೆ ಅವರ ಲೇಖನಿಯಿಂದ 3 ಪುಟಗಳಂತೆ 40 ಸಂಚಿಕೆಗಳಲ್ಲಿ ಸುಂದರವಾಗಿ ಮೂಡಿಬರಲಿದೆ. ಓದುಗರ ಸಲಹೆ, ಸೂಚನೆ, ಟೀಕೆ, ಟಿಪ್ಪಣಿ, ಅಭಿಪ್ರಾಯಗಳಿದ್ದಲ್ಲೂ ನೇರವಾಗಿ ಸಂಪರ್ಕಿಸಿ. ವಿಳಾಸ : ಕೌಂಡಿನ್ಯ, ಕೋಟೆ, ಹೊಳೆನರಸೀಪುರ, ಹಾಸನ ಜಿಲ್ಲೆ Ph. : 08175/273005 **ಸಂಪಾದಕ**

ಅದೇ ಅವನತಿಗೆ ಮತ್ತು ಶತಮಾನದ ಮಹಾ ಮರಣ ಯಜ್ಞಕ್ಕೆ ಕಾರಣವಾಗುತ್ತದೆ. ಮಾಂತ್ರಿಕತೆಯ ರೋಚಕತೆಯೊಂದಿಗೆ ಪ್ರೇಮ, ಪ್ರೀತಿ ಮತ್ತು ದುರಂತದ ಹೃದಯ ಸ್ಪರ್ಶ ಸನ್ನಿವೇಶಗಳ ಸಮಗ್ರತೆಯ ಘಟನೆಗಳು ಪೂರಕವಾಗಿ ಬೆಳೆದು ಬಂದಿದೆ.

ಈ ಕಾದಂಬರಿ ಓದುಗರಿಗೆ ಮಾಂತ್ರಿಕ ಲೋಕದ ಮತ್ತು ಅಘೋರಿಗಳ ಜೀವನದ ಭಯಾನಕ ಸತ್ಯದ ಪರಿಚಯವನ್ನು ಮಾಡಿಕೊಡಲಿದೆ. ಬನ್ನಿ.......ಈಗ ನಿಗೂಢತೆ ಮತ್ತು ಭಯಾನಕತೆ ತುಂಬಿರುವ ಮಾಂತ್ರಿಕ ಲೋಕವನ್ನು ಪ್ರವೇಶಿಸೋಣ.

**ಮಾಂತ್ರಿಕ ಲೋಕ ಮಾಯ ಲೋಕ!**

xxxxx

ಬೃಹದಾಕಾರದ ಗಗನ ಚುಂಬಿತ ಮರಗಳಿಂದ ಆವೃತ್ತಗೊಂಡಿರುವ ಮಹಾ ಅರಣ್ಯ! ಚಂದ್ರನ ಬೆಳಕಾಗಲಿ , ಸೂರ್ಯನ ಕಿರಣಗಳಾಗಲಿ ಒಳಗೆ ಬರಲು ಸಾಧ್ಯವಾಗದ ರೀತಿ ಮರಗಳು ತುಂಬಾ ವತ್ತು ವತ್ತಾಗಿ ಬೆಳೆದು ಆಕಾಶಕ್ಕೆ ಕೊಡೆ ಹಿಡಿದಂತೆ ಕಾಣುತ್ತಿವೆ.

ರಾತ್ರಿ ಹನ್ನೊಂದುವರೆ! ಮಹಾ ಕತ್ತಲು ಆವರಿಸಿಕೊಂಡಿದೆ, ಗಾಳಿ ಸೊಂಯ್ಯನೆ ಬೀಸುತ್ತಿದೆ.

ವಿಪರೀತ ಚಳಿ, ಜೊತೆಗೆ ಗಾಳಿ ಬೀಸುತ್ತಿರುವುದರಿಂದ ಒಂದು ರೀತಿ ನಡುಕ ಉಂಟಾಗಿದೆ. ಚರಪರ ಎಂಬ ಶಬ್ದ!

ಮಾಗಿರುವ ತರಗಲೆಗಳ ಮೇಲೆ ಹೆಜ್ಜೆ ಊರುತ್ತಿರುವುದರಿಂದ ಈ ರೀತಿ ಶಬ್ದ ಉಂಟಾಗುತ್ತಿದೆ.

ಜೀರುಂಡೆ ಝೇಂಕಾರವಾಗುತ್ತಿವೆ. ಮಿಣುಕು ಹುಳುಗಳು ಹಾರಾಡುತ್ತಿವೆ. ಸ್ವಲ್ಪ ದೂರದಲ್ಲಿ ಕಂಡು ಬರುತ್ತಿದೆ ನೀರಿನ ಹೊಂಡ, ಆ ಜಾಗದಿಂದ ಕೇಳಿ ಬರುತ್ತಿವೆ ಕಪ್ಪೆಗಳ ವಟರುವಿಕೆ.

ಗಾಢಾಂಧಕಾರದ ಕತ್ತಲನ್ನು ಸೀಳಿಕೊಂಡು ದಕ್ಷಿಣದ ಕಡೆ ಚಲಿಸುತ್ತಿದೆ ಬೆಳಕು! ಉರಿಯುತ್ತಿರುವ ಬೆಂಕಿಯ ಪಂಜು!

ಸುಮಾರು ಐದೂವರೆ ಅಡಿಗಳ ಎತ್ತರ ಇರುವ ಒಬ್ಬ ದಢೂತಿ ಬಿರ-ಬಿರನೆ ನಡೆಯುತ್ತಿದ್ದಾನೆ.

ಬಲಗೈನಲ್ಲಿ ಉರಿಯುತ್ತಿರುವ ಬೆಂಕಿಯ ಪಂಜು ಇದೆ. ಭುಜದಲ್ಲಿ ಶವ ಜೋತಾಡುತ್ತಿದೆ! ಅದು ಹೆಣ್ಣಿನ ಶವ!

ಅವನು ಸುಮಾರು ನಲವತ್ತೊಂದರ ಪ್ರಾಯದ ವ್ಯಕ್ತಿ. ಅವನ ತಲೆ ಕೂದಲು ಜೊಂಡಿನ ರೀತಿ ಬೆಳೆದಿದೆ. ಅಲ್ಲಲ್ಲಿ ಬೆಳ್ಳಗಾಗಿದೆ. ಗಡ್ಡ ಪೊದೆಯ ರೀತಿ ಇದೆ.

ದಢೂತಿ ದೇಹದವನು, ಅವನು ಸೊಂಟದಲ್ಲಿ ಕಂಬಳಿ ಸುತ್ತಿಕೊಂಡಿದ್ದಾನೆ. ಅವನು ಕತ್ತಿನಲ್ಲಿ ಕಂಡು ಬರುತ್ತಿದೆ.

ತಲೆ ಬುರುಡೆಗಳ ಹಾರ! ಅವನೊಬ್ಬ ಮಾಂತ್ರಿಕ !

ಅವನು ಯಾವುದೋ ನದಿಯಲ್ಲಿ ತೇಲಿಕೊಂಡು ಬರುತ್ತಿರುವ ಶವವನ್ನು ಕಂಡು ನೀರಿಗೆ ಬಿದ್ದು ಈಜಿಕೊಂಡು ಹೋಗಿ ಹಿಡಿದು ಎತ್ತಿಕೊಂಡು ಬಂದಿದ್ದನು.

ಈಗ ಸ್ಮಶಾನಕ್ಕೆ ಹೋಗುತ್ತಿದ್ದಾನೆ. ಅವನೊಬ್ಬ ಶವಗಳ ಆರಾಧಕ. ಇಂದು ಅಮಾವಾಸ್ಯೆ ಆಗಿರೋದ್ರಿಂದ ಅವನು ಈ ಶವವನ್ನು ಎತ್ತಿಕೊಂಡು ಸ್ಮಶಾನಕ್ಕೆ ಬಂದನು.

ವಿಶಾಲವಾದ ಬಯಲು ಪ್ರದೇಶ. ಅದು ಜೋಡಿ ನವಿಲೂರಿನ ಸ್ಮಶಾನ. ಅಲ್ಲಲ್ಲಿ ಕಂಡು ಬರುತ್ತಿದೆ ಉರಿಯುತ್ತಿರುವ ಚಿತೆಗಳು ಮತ್ತು ಕೆಲವು ಕಡೆ ಉಬ್ಬಿರುವ ಸಮಾಧಿಗಳು.

ಅವನು ದಾಪುಗಾಲು ಇಡುತ್ತಾ ನಡೆಯುತ್ತಿದ್ದರೆ ಆ ಜಾಗದಿಂದ ಮಣ್ಣಿನ ಧೂಳು ಮೇಲೆ ಏಳುತ್ತಿದೆ. ಅಲ್ಲಲ್ಲಿ ತಲೆ ಬುರುಡೆಗಳು ಮತ್ತು ಕಾಲಿನ ಮೂಳೆಗಳು ಒಡೆದಿರುವ ಮಡಕೆಗಳು ಬಿದ್ದಿವೆ.

ಈ ಮಾಂತ್ರಿಕನ ಹೆಸರು ಚಂಡಾಕ್ಷ. ಈ ವಯಸ್ಸಿನಲ್ಲಿ ಮಾಂತ್ರಿಕ ಸಾಧನೆ ಮಾಡಲು ಬಂದಿದ್ದಾನೆ. ಅವನು ಸಮಾದಿಯೊಂದರ ಹತ್ತಿರ ಬಂದು ಭುಜದ ಮೇಲೆ ಇರುವ ಶವವನ್ನು ಉರುಳಿಸಿದನು. ಬ್ಯಾಗಿನಲ್ಲಿರುವ ಪೂಜಾ ಸಾಮಗ್ರಿಗಳನ್ನು ತೆಗೆದು ಶವರಾಧನೆಗೆ ಅಗತ್ಯವಿರುವ ರೀತಿ ನೀಟಾಗಿ, ಕ್ರಮವಾಗಿ ಜೋಡಿಸಿದನು. ಶವವನ್ನು ಸಮಾಧಿಗೆ ವರಗಿಸಿ ಅರಿಶಿನ ಕುಂಕುಮ ಬಳಿದು ಚಂಡು ಹೂಗಳ ಹಾರ ಹಾಕಿದನು.

ಶವರಾಧನೆಯ ಪ್ರಾರಂಭ! ಶವದ ಸುತ್ತಲೂ ಎರಡು ತಲೆಬುರುಡೆಗಳನ್ನು ಜೋಡಿಸಿದ್ದಾನೆ. ಅವುಗಳ ಮೇಲೆ ಎರಡು ಹಣತೆ ದೀಪಗಳನ್ನು ಹತ್ತಿಸಿದ್ದಾನೆ. ಈಗ ಕೆಂಪು ಹೂಗಳಿಂದ ಪೂಜೆ ಮಾಡುತ್ತಾ ಮಂತ್ರವನ್ನು ಹೇಳುತ್ತಿದ್ದಾನೆ.

ಉಚ್ಚ ಸ್ವರದ ಮಂತ್ರ!

ಓಂ......ಓಂ......ಓಂ..........

ಹ್ರೀಂಕಾರದ ಆವರ್ತನ

ಲಯ....ಮಂತ್ರಲಯ ಸ್ಥಿತಿ

ಆವರಿಸಿದೆ ನಿಶ್ಯಬ್ಧತೆ!

ಈಗ ಚಂಡಾಕ್ಷ ಮೂಳೆಯ ಚೂರುಗಳನ್ನು ರಕ್ತದಲ್ಲಿ ಅದ್ದಿ ಎಸೆದು ಪೂಜೆ ಮಾಡಿದನು. ಕೆಂಡದ ಮೇಲೆ ಸಾಂಬ್ರಾಣಿ ಪುಡಿಯನ್ನು ಹಾಕಿದನು. ಈಗ ಹೊಗೆ ಆವರಿಸಿಕೊಂಡಿತು. ಎಲ್ಲಾ ಕಡೆಯಿಂದ ಹೊಗೆ ಆವರಿಸಿ ಶವ ವಿಲಕ್ಷಣವಾಗಿ ಕಾಣುತ್ತಿದೆ.

ವಾತಾವರಣದಲ್ಲಿ ಕಲರವತೆ! ನಿಶ್ಯಬ್ಧತೆಯಲ್ಲಿ ಶಬ್ಧ ಚಲನೆ, "ಬರೋ" ಎಂಬ ಶಬ್ಧ!

ನೆಲದ ಮೇಲೆ ಇದ್ದ ಮಣ್ಣಿನ ಧೂಳು ಮತ್ತು ತರಗಲೆಗಳು ರಿವ್ವನೆ ತೂರಿಕೊಂಡು ಬರುತ್ತಿದೆ. ಸಮಾಧಿಗೆ ವರಗಿದ್ದ ಯುವತಿಯ ಶವದಲ್ಲಿ ಮೆಲ್ಲಗೆ...... ತುಂಬಾ ಮೆಲ್ಲಗೆ ಕದಲಾಟ ಆರಂಭವಾಯಿತು. ಮಂತ್ರ ಸ್ವರ ಜಾಸ್ತಿಯಾಗುತ್ತಿದೆ.

ಚಂಡಾಕ್ಷ ಎಂಬ ಈ ಮಾಂತ್ರಿಕ ಮಡಕೆಯಲ್ಲಿರುವ ರಕ್ತವನ್ನು ಎತ್ತಿ ಶವದ ಮೇಲೆ ಸುರಿದನು. ಭಯಾನಕ ದೃಶ್ಯ!

ತಲೆಯಿಂದ ಇಳಿದು ಮುಖ, ಕತ್ತು, ಎದೆ ಮತ್ತು ಸೊಂಟದ ತನಕ ಹರಿಯುತ್ತಿದೆ ರಕ್ತ! ಭೀಕರ ಶಬ್ಧ! ಸಮೀಪದಲ್ಲೆ ಇದ್ದ ಮರವೊಂದರ ಕೊಂಬೆಗಳು ಲಟಲಟನೆ ಮುರಿದ ಶಬ್ಧ! ಶವದ ಕಣ್ಣುಗಳು ತೆರೆಯಿತು, ಆದರೆ ರೆಪ್ಪೆಗಳು ಆಡುತ್ತಿಲ್ಲ

ಮಹಾ ದೃಶ್ಯ! ಶವ ಹೊರಳುತ್ತಿದೆ. ಮಾಂತ್ರಿಕ ನಲವತ್ತು ಚರಣಗಳ ಕಠಿಣ ಸಾಲುಗಳನ್ನು ಹೊಂದಿರುವ ಮಂತ್ರವನ್ನು ಹೇಳುತ್ತಿದ್ದಾನೆ. ಶವ ಏಳುತ್ತಿದೆ! ಮೆಲ್ಲ ಮೆಲ್ಲಗೆ ಅಲುಗಾಡುತ್ತಿದೆ.

ಕೊನೆಯ ಚರಣ! ಶವ ಕದಲಿತು! ಆ ಶವದ ಮೈ ಮೇಲೆ ನೂಲಿನ ಎಳೆ ಸಹ ಇಲ್ಲ. ಬೆಂಕಿಯ ಬೆಳಕಲ್ಲಿ ಉಜ್ವಲ ರೀತಿಯಲ್ಲಿ ಹೊಳೆಯುತ್ತಿದೆ. ಆ ಯುವತಿಯ ಸುಂದರವಾದ ಅಂಗಗಳು.

ಮಂತ್ರ ಮುಗಿದ ಕೂಡಲೇ ಆ ಶವ ಮಾಂತ್ರಿಕನ ಹತ್ತಿರ ಬಂದಿತು. ಅವನ ಕಡೆ ಕೈ ಚಾಚಿತು. ಆಗ ಈ ಮಾಂತ್ರಿಕ ಕೈ ಸೇರಿಸಿ ಅದುಮಿದನು. ಶವದ ಕೈ ತುಂಬಾ ತಣ್ಣಗೆ ಕೊರೆಯುತ್ತಿದೆ.

ಶವವನ್ನು ಈಗ ಸಮಾಧಿಯ ಮೇಲೆ ಮಲಗಿಸಿದನು. ಮಂತ್ರ ಹೇಳುತ್ತಲೆ ಶವದ ಮೇಲೆ ಮಲಗಿದನು.

ಎದೆಗೆ ಎದೆ ಸೇರಿತು, ತುಟಿಗೆ ತುಟಿ ಸೇರಿತು, ತೊಡೆಗೆ ತೊಡೆ ಸೇರಿತು ಶವ ಸಂಭೋಗ! ಈಗಲು ಮಂತ್ರ ಹೇಳುತ್ತಿದ್ದಾನೆ

ಶವದೊಂದಿಗೆ ರತಿ ಮಿಲನ! ಇಡೀ ಸ್ಮಶಾನದಲ್ಲಿ ವಿಚಿತ್ರ ರೀತಿಯ ಅರಚುವ, ಅಬ್ಬರ ಕೇಳಿ ಬರುತ್ತಿದೆ. ಯಾರೂ ಕಾಣುತ್ತಿಲ್ಲ ಆಗೋಚರ ಅಬ್ಬರ! ನೆಲದ ಮೇಲಿರುವ ತಲೆ ಬುರುಡೆಗಳು ಈಗ ಯಾವ ಆಧಾರವು ಇಲ್ಲದಂತೆ ಮೇಲೆ ತೇಲುತ್ತಿವೆ.

ಅಸಹ್ಯಕರ ಸಂಭೋಗ! ಬೆವರುತ್ತಿದ್ದಾನೆ ಮಾಂತ್ರಿಕ! ಹದಿನೈದು ನಿಮಿಷಗಳಾಯಿತು, ತೃಪ್ತಿ....ಪೈಶಾಚಿಕ ತೃಪ್ತಿ!

ಮಾಂತ್ರಿಕ ಎದ್ದು ಬಂದು ಈಗ ಹತ್ತಿರದಲ್ಲೇ ಇರುವ ಹೊಂಡದಲ್ಲಿ ಮುಳುಗಿ ಮೇಲೆ ಬಂದನು. ಮಡಕೆಯಲ್ಲಿ ನೀರನ್ನು ತುಂಬಿಸಿಕೊಂಡು ಬಂದು ಸಂಭೋಗದಿಂದ ಉಂಟಾಗಿರುವ ಅಸಹ್ಯಕರವನ್ನು ತೊಳೆದನು. ಕೊನೆಯ ಹಂತ.....! ಮಾಂತ್ರಿಕ ಈಗ ಶವವನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡು ಪ್ರಾರಂಭ ಮಾಡಿದನು. ಭಯಾನಕ ದೃಶ್ಯ! ಶವದ ಬಲಗೈ ಹಿಡಿದು ಅದರ ಬೆರಳುಗಳನ್ನು ಹಸಿ ಕ್ಯಾರೆಟ್ ರೀತಿ ಕಚ್ಚಿಕೊಂಡು ತಿನ್ನುತ್ತಿದ್ದಾನೆ. ಇದು ಶವ ಭಕ್ಷಣ ಆರಾಧನೆ

ಈಗ ಮಾಂತ್ರಿಕ ಶವದ ತೋಳಿಗೆ ಬಾಯಿ ಸೇರಿಸಿ ಅಲ್ಲಿನ ಮಾಂಸ ಕಿತ್ತು ತಿನ್ನುತ್ತಿದ್ದಾನೆ. ಅಗೋಚರ ರೂಪದಲ್ಲಿರುವ ಪ್ರೇತ, ಭೂತ ಪಿಶಾಚಿಗಳು ಅಬ್ಬರಿಸುತ್ತಾ ಆರ್ಭಟಿಸುತ್ತಿವೆ. ಕಪಾಲಿಕರು ಮತ್ತು ಅಘೋರಿ ಪಂಥಗಳ ಆರಾಧಕರು ಪ್ರತಿ ತಿಂಗಳ ಅಮಾವಾಸ್ಯೆಯಲ್ಲಿ ಶವ ಆರಾಧನೆ, ಶವ ಸಂಭೋಗ, ಶವ ಭಕ್ಷಣೆ ಮಾಡುತ್ತಾರೆ. ಉತ್ತರ ಭಾರತದಲ್ಲಿ ಅಘೋರಿಗಳು ಜಾಸ್ತಿ. ಈ ಸ್ಮಶಾನದಲ್ಲಿ ಇರುವುದು ಈ ಚಂಡಾಕ್ಷ ಎಂಬ

ಮಾನವನ ಗುರಿ ದಿಗಂತದಂಥದ್ದು, ಅವನು ಮುನ್ನಡೆಯುತ್ತಾ ಹೋದಂತೆಲ್ಲಾ ಅದು ಹಿನ್ಸರಿಯುತ್ತದೆ.

ನಲವತ್ತೆಂಟರ ವಯಸ್ಸಿನ ಮಾಂತ್ರಿಕ ಮಾತ್ರ ಅಲ್ಲ. ಇನ್ನು ಇಬ್ಬರಿದ್ದಾರೆ! ಅವರು ಇದೇ ಸ್ಮಶಾನದ ಬೇರೆ, ಬೇರೆ ಜಾಗಗಳಲ್ಲಿ ಇದೇ ರೀತಿ ಶವರಾಧನೆ ಮಾಡುತ್ತಿದ್ದಾರೆ. ಆ ಇಬ್ಬರು ಯಾರು ?

ದಿಂಡಯ್ಯ- 25 ವರ್ಷ! ಚಕ್ರ- 23ವರ್ಷ! ರಾತಿ ಒಂದೂವರೆ ಘಂಟೆ!

ಸ್ಮಶಾನದ ಬೇರೆ, ಬೇರೆ ಕಡೆಗಳಿಂದ ಬರುತ್ತಿದ್ದಾರೆ ಈ ಮೂವರು ಮಾಂತ್ರಿಕರು. ಚಂಡಾಕ್ಷ, ದಿಂಡಯ್ಯ.....ಚಕ್ರ! ಕತ್ತಲನ್ನು ಸೀಳಿಕೊಂಡು ಉರಿಯುತ್ತಿರುವ ಬೆಂಕಿಯ ಪಂಜುಗಳೊಂದಿಗೆ ಬರುತ್ತಿದ್ದಾರೆ. ಮೂವರೂ ಅಲ್ಲಿ ಸೇರಿದರು! ಒಂದೇ ಸರಳ ರೇಖೆ! ಈ ಮೂವರು ಮಾಂತ್ರಿಕರು ಈಗ ಪರಸ್ಪರ ಮುಖ ನೋಡಿಕೊಂಡು ಅಲ್ಲಿಂದ ಹೊರಟರು. ಈ ಮೂವರು ಸ್ನೇಹಿತರಲ್ಲ, ಆದರೆ ಚೆನ್ನಾಗಿ ಪರಿಚಯವಿದೆ. ಇವರು ಮನಸ್ಸು ಮಾಡಿದ್ದರೆ ಒಳ್ಳೆಯ ಸ್ನೇಹಿತರಾಗಬಹುದಿತ್ತು. ಆದರೆ ಆಗಿರಲಿಲ್ಲ. ಕಾರಣ ಅಸೂಯೆ! ಈ ಮೂವರು ಯಾರು? ಅದೇ ಊರಿನಲ್ಲಿರುವ ಮಹಾ ದುಷ್ಟ ಮಾಂತ್ರಿಕ ತ್ರಿಪುರ ಎಂಬುವನ ಶಿಷ್ಯರು! ತ್ರಿ ಪು ರ ಶಕ್ತಿಶಾಲಿ ಮಾಂತ್ರಿಕ!
ಇವನು ಪಂಚ ಮಹಾ ಶಕ್ತಿಗಳನ್ನು ಒಲಿಸಿಕೊಂಡು ಅದ್ಭುತ ರೀತಿಯಲ್ಲಿ ಸಾಧನೆ ಮಾಡಿದ್ದಾನೆ. ಮಹಾನ್ ಕಪಾಲಿಕ!

ಇವನ ಹತ್ತಿರ ಮಾಂತ್ರಿಕ ವಿದ್ಯೆ ಕಲಿಯಲು ಈ ಮೂವರು ಮಾಂತ್ರಿಕರು ಬಂದಿದ್ದಾರೆ.

ಆಶ್ಚರ್ಯದ ಸಂಗತಿ ಇದೆ! ಏನು ಗೊತ್ತೆ?

ಈ ಮೂವರು ಒಂದೇ ಊರಿನವರು. ಆದರೆ ಇವರಿಗೆ ಪರಸ್ಪರ ಪರಿಚಯ ಇರಲಿಲ್ಲ.

ಹಲವಾರು ಸಲ ಮುಖ ನೋಡಿದ್ದರೂ ಸಹ ಊರಿನಲ್ಲಿ ಇವರುಗಳು ಮಾತಾಡಿಸುತ್ತಿರಲಿಲ್ಲ.

ಅಂತಹ ಅಗತ್ಯ ಬಂದಿರಲಿಲ್ಲ.

ಈಗ ಕೆಲವು ವರ್ಷಗಳಿಂದ ಇವರುಗಳು ಮಹಾ ಮಾಂತ್ರಿಕ ತ್ರಿಪುರನ ಹತ್ತಿರ ಕಲಿಯುತ್ತಿದ್ದಾರೆ.

ತ್ರಿಪುರ ಮಹಾ ದುಷ್ಟ!

ಮಹಾ ಸ್ವಾರ್ಥಿ!

ಅವನೊಬ್ಬ ಮಾನವ ರೂಪದ ರಾಕ್ಷಸ!

ಆದರೆ ಮಹಾ ಮಾಂತ್ರಿಕ

ಇವನು ಈ ರೀತಿ ಸಾಧನೆ ಮಾಡಿರುವುದರಿಂದಲೇ ಚಂಡಾಕ್ಷ ಎಂಬ ವ್ಯಕ್ತಿ ತನ್ನ ನವಲತ್ತೆಂಟನೆ ವಯಸ್ಸಿನಲ್ಲಿ ಈ ಮಾಂತ್ರಿಕ ಸಾಧನೆಯನ್ನು ಮಾಡಿದ್ದಾನೆ.

ಮಾಂತ್ರಿಕ ವಿದ್ಯೆ ಕಲಿಯುತ್ತಿದ್ದಾನೆ.

ಉಳಿದ ಇಬ್ಬರು ಶಿಷ್ಯರು ದಿಂಡಯ್ಯ ಮತ್ತು ಚಕ್ರ ಅವರಿಬ್ಬರು ತುಂಬು ಪ್ರಾಯದ ಯುವಕರು.

ತೀವ್ರ ರೀತಿಯ ಸಾಧನೆ ಮಾಡುತ್ತಿದ್ದಾರೆ.

ಅಮಾವಾಸ್ಯೆಯ ರಾತ್ರಿ ಶವರಾಧನೆ ಮಾಡಿಕೊಂಡು ಬನ್ನಿ ಎಂದು ಈ ಮಾಂತ್ರಿಕನೇ ಅವರಿಗೆ ಹೇಳಿದ್ದನು.

xxxxx

ಮಾಂತ್ರಿಕ ತ್ರಿಪುರನ ಮನೆ!

ಊರಿನಿಂದ ಹೊರಭಾಗದಲ್ಲಿ ದಕ್ಷಿಣದ ಕಡೆ ನಿರ್ಜನ ಪ್ರದೇಶದಲ್ಲಿರುವ ಮನೆ! ಸುತ್ತಲು ಎತ್ತರವಾದ ತಂತಿ ಬೇಲಿ ಇದೆ. ಎಲ್ಲಾ ಕಡೆ ಪೊದೆಗಳು ಕಾಂಗ್ರೆಸ್ ಪಾಪಸ್‌ಕಳ್ಳಿ, ಗೇರು ನಾಡು ಗಿಡಗಳು ಬೆಳೆದು ಕೂಡಿರೊದ್ರಿಂದ ಒಳಗಿನ ದೃಶ್ಯಗಳು ರಸ್ತೆಯಲ್ಲಿ ತಿರುಗುವ ಮಂದಿಗೆ ಕಾಣಿಸುವುದಿಲ್ಲ.

ಬಲು ಅಪರೂಪದ ದೃಶ್ಯ! ನಕ್ಷತ್ರದ ಆಕಾರದಲ್ಲಿ ಕೇವಲ ಮರದ ದಿಮ್ಮಿಗಳ ಮೂಲಕ ನಿರ್ಮಿಸಿರುವ ಮನೆ

ಅಲ್ಲಿ ರಾತ್ರಿಯ ಹೊತ್ತು ಮಂತ್ರ ಕೇಳಿ ಬರುತ್ತದೆ. ವಿಲಕ್ಷಣ ಶಬ್ಧ ಉಂಟಾಗುತ್ತದೆ.

ಯಾವ ಸಹಾಯ ಪ್ರಯತ್ನ ಇಲ್ಲದೆ ಆವರಣದಲ್ಲಿ ಕೆಂಪು ನೀಲಿ, ಹಸಿರು ಜ್ವಾಲೆ ಏಳುತ್ತದೆ.

ಊರಿನ ಜನಗಳು ರಾತ್ರಿ ಇರಲಿ ಹಗಲಿನ ವೇಳೆ ಸಹ ಈ ಮನೆ ಕಡೆ ನೋಡುವ ಧೈರ್ಯ ಮಾಡೋದಿಲ್ಲ.

ಭಯ...ಮಾಂತ್ರಿಕನ ಭಯ!

ರಾತ್ರಿಯ ಹೊತ್ತು ದಾರಿ ತಪ್ಪಿ ಬಂದವರು ಆ ಮನೆಯ ಹತ್ತಿರ ಬಂದ ಕೂಡಲೇ ರಕ್ತ ಕಾರಿ ಕೊಂಡು ಸತ್ತಿದ್ದಾರೆ!

ಅಮಾವಾಸ್ಯೆ, ಹುಣ್ಣಿಮೆ ದಿನಗಳಲ್ಲಿ ಯಾರೂ ಸಹ ಆ ಮನೆ ಹತ್ತಿರ ಬರುವುದಿಲ್ಲ.

ಮಾಂತ್ರಿಕ ತ್ರಿಪುರ ತುಂಬಾ ಅಪರೂಪಕ್ಕೆ ಮಾತ್ರ ಆ ಊರಿನೊಳಗೆ ಬರುತ್ತಾನೆ.

ಅವನನ್ನು ನೋಡಲು ಬೇರೆ ಬೇರೆ ಊರುಗಳಿಂದ ಕೆಲವು ಶ್ರೀಮಂತರುಗಳು ಬರುತ್ತಾರೆ.

ರಹಸ್ಯ ವ್ಯವಹಾರ!

ದುಷ್ಟ ಮಾಂತ್ರಿಕರು ದುಡ್ಡಿಗಾಗಿ ಮಾಂತ್ರಿಕ ವಿದ್ಯೆಯನ್ನು ಕೆಟ್ಟ ರೀತಿಯಲ್ಲಿ ಉಪಯೋಗ ಮಾಡುತ್ತಾರೆ.

ತ್ರಿಪುರನ ಹತ್ತಿರ ಹಲವಾರು ಲಕ್ಷಗಳು ಇದೆ. ಅವನ ಮನೆಯಲ್ಲಿ ಮೂವರು ಯುವತಿಯರಿದ್ದಾರೆ.

ಇಪ್ಪತ್ತರೊಳಗಿನ ಪ್ರಾಯದವರು!

ಅವರು ಸೌಂದರ್ಯ ಸ್ಪರ್ಧೆಯಲ್ಲಿ ಭಾಗವಹಿಸಿದ್ದರೆ ಖಂಡಿತಾ ಗೆಲ್ಲುತ್ತಾರೆ.

ಸಿನಿಮಾ ಹಿರೋಯಿನ್, ಮಾಡೆಲ್‌ಗಳನ್ನು ಮೀರಿಸಬಲ್ಲಂತ ಅಪರೂಪದ ಚೆಲುವೆಯರು.

ಈ ಯುವತಿಯರು ಯಾರು?

ತ್ರಿಪುರನ ಹೆಂಡತಿಯರು!

ನಿಜ...ಈ ಮಾಂತ್ರಿಕ ಮೂವರು ಚೆಲುವೆಯರನ್ನು ಶಾಸ್ತ್ರದ ರೀತಿ ಮದುವೆ ಮಾಡಿಕೊಂಡಿದ್ದಾನೆ.

ಸುಮಾರು ಐವತ್ತರ ಪ್ರಾಯ ಆಗಿರುವ ಈ ಮಾಂತ್ರಿಕನನ್ನು ಚೆಲುವೆಯರು ಯಾಕೆ ಒಪ್ಪಿಕೊಂಡರು?

ಮಂತ್ರ ಶಕ್ತಿ ಪ್ರಭಾವ!

ಈ ಚೆಲುವೆಯರ ಮನಸ್ಸಿನ ಮೇಲೆ ಹಿಡಿತ ಸಾಧಿಸಿ ದಾಸಿಯರನ್ನಾಗಿ ಮಾಡಿಕೊಂಡಿದ್ದಾನೆ. ಅವನು ಹೇಳಿದಂತೆ ಎಲ್ಲಾ ರೀತಿಯ ಸೇವೆ ಮಾಡುತ್ತಾರೆ. ಅವನ ವಿಕೃತ ಕಾಮದ ತೆವಲುಗಳನ್ನು ತೀರಿಸುತ್ತಾರೆ.

ಇಂತಹ ದುಷ್ಟ, ಕೆಟ್ಟ ಮಾಂತ್ರಿಕನಿಂದ ವಿದ್ಯೆ ಕಲಿಯುತ್ತಿದ್ದಾರೆ ಈ ಮೂವರು.

ಚಂಡಾಕ್ಷ, ದಿಂಡಯ್ಯ, ಚಕ್ರ!

ಸನ್ನಿವೇಶಗಳು ಬದಲಾಗಿ ವಿಚಿತ್ರ ರೀತಿಯ ವಿಷಮಯ ವೃತ್ತ ಸೃಷ್ಟಿಸಲಿದೆ.

(ಮುಂದಿನ ಸಂಚಿಕೆ ನೋಡಿ)

---

ಉತ್ತಮ ಗುರಿಗಳನ್ನು ಹೊಂದಿದ ಜೀವನವೇ ಪ್ರಶಂಸಿಸಲ್ಪಡ ತಕ್ಕಂತಹ ಜೀವನವಾಗುತ್ತದೆ.

# ಕೊಡಗು ಗೌಡರ ಐನ್‌ಮನೆ

ಅನ್ನಪೂರ್ಣೇಶ್ವರಿಯೂ, ಭಾಗ್ಯಲಕ್ಷ್ಮಿಯೂ, ನಿತ್ಯ ಮಂಗಲೆಯೂ ಆದ ಸಹ್ಯಾಚಲೇಂದ್ರತನ. ಕಾವೇರಿಯು ಪಶ್ಚಿಮಬೆಟ್ಟಗಳ ಸಾಲಿನಲ್ಲಿರುವ ಭವ್ಯ ಪರಂಪರೆಯುಳ್ಳ ಬೆಡಗಿನ ನಾಡಾದ ಕೊಡಗಿನ ಬ್ರಹ್ಮಗಿರಿಯಲ್ಲಿ ಜಲರೂಪ ತಳೆದು ಇಲ್ಲಿಂದ ನದಿಯಾಗಿ ಸುಮಾರು 767 ಕಿ. ಮೀ. ದೂರ ಹರಿದು ತಮಿಳುನಾಡಿನ ತಂಜಾವೂರು ಜಿಲ್ಲೆಯ ಕಾವೇರಿ ಪೂಂಪಟ್ಟಣ ಎಂಬಲ್ಲಿ ಬಂಗಾಳ ಸಮುದ್ರದಲ್ಲಿ ಲೀನವಾಗಿದ್ದಾಳೆ. ಇಂತಹ ಪವಿತ್ರ ಪಾವನ ಕಾವೇರಿಯ ಉಗಮ ಜಿಲ್ಲೆಯಲ್ಲಿರುವ ಅನೇಕ ಪ್ರಮುಖ ಜನಾಂಗಗಳಲ್ಲೊಂದು ಕೊಡಗು ಗೌಡ ಜನಾಂಗ. ಇವರಿಗೆ ಇವರದ್ದೇ ಆದ ವಿಶಿಷ್ಟ್ಯ ಪೂರ್ಣ ಶಾಸ್ತ್ರ ಸಂಪ್ರದಾಯ ಆಚಾರ ವಿಚಾರ ನಡೆ, ನುಡಿ, ಉಡುಗೆ, ತೊಡುಗೆ, ಸಂಸ್ಕೃತಿ ಪದ್ಧತಿ ಪರಂಪರೆಗಳಿರುವುವು. ಇವರು ಕೊಡಗಿನಲ್ಲಿ ಆದಿಕಾಲದಿಂದಲೂ ಇರವರೆಂಬುವುದಕ್ಕೆ ಭಾಗಮಂಡಲ ದೇವಸ್ಥಾನದಲ್ಲಿ "ಗೌಡರೇ ದೇವಸ್ಥಾನದಲ್ಲಿ ಹಾಗೂ ತಲಕಾವೇರಿಯಲ್ಲಿ ತಕ್ಕ ಮುಖ್ಯಸ್ಥರಾಗಿರುವುದೇ ಪ್ರತ್ಯಕ್ಷ ಸಾಕ್ಷಿ. ಲೋಕಪಾವನೆ ಜಗನ್ಮಾತೆ ಕಾವೇರಿ ತಾಯಿಯ ತಕ್ಕ ಮುಖ್ಯಸ್ಥರಾಗಿ ಸೇವೆ ಮಾಡುವ ಸುಯೋಗ ದೊರೆತಿರುವುದು ಕೊಡಗಿನ ಗೌಡರ ಪೂರ್ವ ಜನ್ಮದ ಸುಕೃತ ಫಲ.

ಈ ಗೌಡ ಜನಾಂಗದವರು ಹಿಂದಿನಿಂದಲೂ ಒಂದೇ ಮನೆಯಲ್ಲಿ ಅವಿಭಾಜ್ಯ ಕುಟುಂಬ ಪದ್ಧತಿಯಂತೆ ಪರಸ್ಪರ ಪ್ರೀತಿ ಭಾವನೆಗಳಿಂದ ಅನ್ಯೋನ್ಯತೆಯಿಂದ ಜೀವನ ನಡೆಸುತ್ತಿದ್ದರು. ಆಗ ಅವರು ಜೀವಿಸುತ್ತಿದ್ದ ಆ ಮನೆಯೇ ಆ ಕುಟುಂಬದ ಐನ್ ಮನೆ. ಆ ಕಾಲದಲ್ಲಿ ಆ ಐನ್ ಮನೆಗಳಲ್ಲಿ ನಡೆಯುತ್ತಿದ್ದ ಮದುವೆ ಸಮಾರಂಭಗಳು ಹಬ್ಬ ಹರಿದಿನಗಳು ವರ್ಣಾತೀತವಾದವುಗಳು. ಅಲ್ಲದೆ ನಯನ ಮನೋಹರವಾಗಿರುತ್ತಿತ್ತು. ಆದರೆ ಇಂದೀಗ ಜನರು ಉದ್ಯೋಗಾಧಿಕಾರಿಗಳಾಗಿಯೋ ಅಥವಾ ಜೀವನೋಪಯೋಗಕ್ಕಾಗಿ ಹಳ್ಳಿ ತೊರೆದು ಪಟ್ಟಣ ಪ್ರದೇಶಗಳಿಗೂ ಅಥವಾ ಇನ್ನಾವುದಾದರೂ ಪ್ರದೇಶಗಳತ್ತ ಮುಖ ಮಾಡಿ ಮುಂದಡಿ ಇಡುತ್ತಿರುವುದರಿಂದಲೋ ಗೌಡ ಕುಟುಂಬಗಳ 'ಐನ್ ಮನೆಗಳ' ಪರಿಸ್ಥಿತಿ ಹೇಳಲಸದಳ.

ಈ ಶಿಥಿಲಾವಸ್ಥೆಯತ್ತ ಜಾರುತ್ತಿರುವ ಗೌಡರ ಐನ್‌ಮನೆಗಳನ್ನು ಜೀರ್ಣೋದ್ಧಾರ ಮಾಡುವುದಾಗಲೀ ನವ ನಿರ್ಮಾಣಗಳಿಂದಾಗಲೀ ಉಳಿಸಿ, ಬೆಳೆಸಿ, ಪೂಜಿಸಿ, ಐನ್ ಮನೆಗಳ ಹಿಂದಿನ ಪಾವಿತ್ರತೆಯನ್ನು ಕಾಪಾಡಿಕೊಂಡು ಜನಾಂಗದ ಮುಂದಿನ ಪೀಳಿಗೆಯವರಿಗೆ ಬಳುವಳಿಯಾಗಿ ನೀಡುವುದೇ ಹಿರಿಯರ ಹಾಗೂ ವರ್ತಮಾನಕಾಲದ ಪ್ರತಿಯೊಬ್ಬ ಕೊಡಗು ಗೌಡರ ಆದ್ಯ ಕರ್ತವ್ಯವೂ ಹೌದು. ಜವಾಬ್ದಾರಿಯು ಹೌದು. ಇದಕ್ಕಾಗಿ ಪ್ರತಿಯೊಬ್ಬ ಗೌಡರು ಲಿಂಗಬೇದಭಾವ ಮರೆತು ತನುಮನಧನಗಳರ್ಪಣೆ ಮಾಡಿದಲ್ಲಿ ಗೌಡರನ್ನು ಜಗತ್ತು ಗುರ್ತಿಸಬಹುದು.

ಈ ಹಿಂದೆ ಗೌಡರ ಐನ್ ಮನೆಗಳಲ್ಲಿ ನಡೆಯುತ್ತಿದ್ದ ಪದ್ಧತಿ ಪರಂಪರೆಗಳು ಮನೆಗಳ ಪವಿತ್ರತೆ ಶ್ರೇಷ್ಠತೆಗಳು ಗೌಡ ಕುಟುಂಬಗಳ ಅವಿಭಾಜ್ಯ ಹಕ್ಕಿನಂತಿದ್ದವು. ಹಾಗೂ ಆದರ್ಶಪ್ರಾಯವಾದ ನೀತಿ ನಿಯಮಗಳ ಜನಾಂಗದ ಸಂಸ್ಕೃತಿಗೆ ಹಾಗೂ ಜನಾಂಗದ ಭವಿಷ್ಯಕ್ಕೆ ಹಿಡಿದ ಕಳಸ ಕನ್ನಡಿ ಗಳಂತಿದ್ದವು. ಗೌಡ ಜನಾಂಗ ಯಾವುದೇ ಶುಭ ಸೋಬಾನೆಗಳು ಮದುವೆ ಮುಂತಾದ ಸಮಾರಂಭಗಳು ನಡೆಯಬೇಕಾದರೆ ಮೊದಲು ಕುಟುಂಬದ ಮೂಲ ಪುರುಷರಿಗೆ ಅಂದರೆ ಗುರುಕಾರಣನಿಗೆ ಎಡೆ ಇಟ್ಟು, ಅವನಿಂದ ಆಶೀರ್ವಾದ ಪಡೆಯುವ ಅಮೂಲ್ಯ ಸಂಪ್ರದಾಯ ಅಂದಿನಿಂದ ಇಂದಿನವರೆವಿಗೂ ನಡೆದು ಬರುತ್ತಿದೆ ಮುಂದೆಯು ನಡೆಯುತ್ತಲಿರುವುದು ನಡೆಯಲೇ ಬೇಕು.ಐನ್ ಮನೆಗಳಲ್ಲಿ ಈ ಕಾರ್ಯಕ್ರಮಗಳನ್ನು ಹಾಗೂ ಪದ್ಧತಿ ಪರಂಪರೆಗಳನ್ನು ನಡೆಸಿಕೊಂಡು ಬರಬೇಕಾದರೆ ಗೌಡರ ಆಯಾ ಕುಟುಂಬಗಳ ಹಿರಿಯರು ಹಾಗೂ ಪಟ್ಟೆದಾರರು ಪ್ರಮುಖರು. ಕುಟುಂಬ ಒಬ್ಬರು ದೈವಾದೀನರಾದಲ್ಲಿ ಅವರನ್ನು ಹದಿನಾರು ಕೂಡಿಸಲು ಈಗಲೂ ಈ ಐನ್‌ಮನೆಗಳೇ ಬೇಕು. ಗೌಡರುಗಳು ಬದುಕಿದ್ದಾಗಲೂ ಸಂಘಜೀವಿ, ಅಲ್ಲದೆ ಮೃತರಾದ ಮೇಲೂ ಸಹ ಸಂಘ ಜೀವಿ(ಕುಟುಂಬ ಜೀವಿಗಳು) ಎನ್ನುವುದಕ್ಕೆ ಮೃತರಾದವರಿಗೆ ಹದಿನಾರು ಕೂಡಿಸುವುದೇ ಸಾಕ್ಷಿ. ಅಂದರೆ ಮೃತರಾದವರು ಆ ಕುಟುಂಬದಲ್ಲಿ ಹಿಂದೆ ಮೃತರಾದ ಪೂರ್ವಿಕರ ಜತೆಯಲ್ಲಿ ಸ್ವರ್ಗದಲ್ಲಿರಲಿ, ಒಬೊಂಟಿಯಾಗಿ ಪಿಶಾಚಿಯಂತಿರ ಬಾರದೆಂಬ ಅರ್ಥದಲ್ಲಿ ಸತ್ತವರಿಗೆ ಹದಿನಾರು ಕೂಡಿಸುವುದರ ಅರ್ಥವು ಹೌದು. ಸೂಕ್ತವು ಹೌದು. ಅಲ್ಲದೆ ವರ್ಷಕ್ಕೆ ಒಂದಾವರ್ತಿ ಕಾರ್ತಿಂಗಳಲ್ಲಿ ನಡೆಯುವ ಕಾರ್ತಿಂಗಳ ಹರಕೆಯ ಕಾರ್ಯಕ್ರಮಗಳು ಕೂಡಾ ಐನ್‌ಮನೆಯಲ್ಲಿಯೇ ನಡೆಯುವುದು. ಅಂದ ಮೇಲೆ ಐನ್ ಮನೆಗಳ ವೈಶಿಷ್ಟ್ಯತೆ ಹಾಗೂ ಅವಶ್ಯಕತೆ ಏನೆಂದು ಈಗಾಗಲೇ ಅರಿವಾಗಿರಲೇ ಬೇಕು. ಕುಟುಂಬದ ಎಲ್ಲರೂ ಸೇರಿ ನಕ್ಕು ನಲಿದು ಸುಖ ದುಃಖಗಳ ದುಗುಡ ದುಮ್ಮಾನಗಳನ್ನು ಹಂಚಿಕೊಳ್ಳಲು ಹಾಗೂ ಆಚಾರ ವಿಚಾರ ಶಾಸ್ತ್ರ ಸಂಪ್ರದಾಯ ಪದ್ಧತಿ ಪರಂಪರೆಗಳನ್ನು ಸಾಲಂಕೃತವಾಗಿ ಆಚರಣೆಗಿಳಿಸಿ ಉಳಿಸಿ ಬೆಳೆಸಿ ಕುಟುಂಬದ ಒಪ್ಪ ಒಗ್ಗಟ್ಟನ್ನು ವೃದ್ಧಿಪಡಿಸಿ ಉಳಿಸಿಕೊಳ್ಳಲು ಇಂತಹ ಐನ್ ಮನೆಗಳು ಅತ್ಯಾವಶ್ಯಕ. ಹಾಗೂ ಆಧರಣೀಯ ಗೌಡರ ಯಾವುದೇ ಐನ್ ಮನೆಗಳ ಮುಂಬಾಗಿಲಿನಲ್ಲಿ ತಲೆ ಬಾಗಿ ಮೆಟ್ಟಲೇರಿದರೆ ಮೈ ಮನಗಳಲ್ಲಿ ಅವರ್ಣನೀಯ ಅನುಭವ ಆನಂದಗಳುಂಟಾಗುವುದನ್ನು ಅನುಭವಿಸಿದರೆ ಮಾತ್ರ ಅರಿವಿಗೆ ಬರುವುದು. ಐನ್‌ಮನೆಯ ಕೈಯಾಲೆಯಲ್ಲಿ ಕುಳಿತು ಕುಟುಂಬದ ಪಟ್ಟೆದಾರರು ಕುಟುಂಬ ಕಲಹಗಳ ಬಗ್ಗೆ ನೀಡುತ್ತಿದ್ದ ತೀರ್ಪುಗಳು ಆದೇಶಗಳು ಹಿಂದಿನ ಕಾಲದಲ್ಲಿ ರಾಜರುಗಳು ನೀಡುತ್ತಿದ್ದ ಹುಕುಂನಾಮೆಯಂತಿರುತ್ತಿದ್ದವು. ಆ ಕುಟುಂಬದ ಪಟ್ಟೆದಾರರುಗಳು ನೀಡುತ್ತಿದ್ದ ಆದೇಶಗಳು ಕಾನೂನು ಬದ್ಧ ಹಾಗೂ ಪಾಲನೀಯಗಳಾಗಿರುತ್ತಿದ್ದವು. ಈ ಐನ್ ಮನೆಗಳು ಕುಟುಂಬಹಗಳಿಗೆ ಪವಿತ್ರ ದೇವಾಲಯಗಳಂತಿದ್ದವು. ಆದರೆ ಇಂದೇನಾಗುತ್ತಿದೆ? ನಮ್ಮ ಗೌಡರ ಐನ್ ಮನೆಗಳು ಅವನತಿಯ ಹೆದ್ದಾರಿ ಹಿಡಿದಿದೆ. ಆಚಾರ ವಿಚಾರ ಪದ್ಧತಿ ಪರಂಪರೆ ಶಾಸ್ತ್ರ ಸಂಪ್ರದಾಯಗಳು ಅವನತಿಯ ಅಂಚಿನಲ್ಲಿದೆ. ಸಂಪ್ರದಾಯ ಬದ್ಧ ಉಡಿಗೆ ತೊಡಿಗೆಗಳೇನಾದರೂ ಇದೆಯೇ ಇದಕ್ಕೆ ಕಾರಣರ್ಯಾರು ಹಿರಿಯರೇ ಅಥವಾ ವಿದ್ಯಾರ್ಜನೆಗಾಗಿ ಪಟ್ಟಣ ಸೇರಿ ಪಾಶ್ಚಿಮಾತ್ಯ ಸಂಸ್ಕೃತಿಯ ಒಲವು ತೋರಿಸುತ್ತಿರುವ ನಮ್ಮ ಯುವ ಪೀಳಿಗೆಯವರೇ? ಯಾರೆ ಇರಲಿ ಏನೇ ಇರಲಿ ಈಗಿನ ಬದಲಾವಣೆಯ ಬೀಸುಗಾಳಿಗೆ ಜನಾಂಗದ ಪ್ರತಿಯೊಬ್ಬರು ಶಾಸ್ತ್ರ ಸಂಪ್ರದಾಯ ಆಚಾರ ವಿಚಾರ ನಡೆ ನುಡಿ ಉಡಿಗೆ ತೊಡಿಗೆಗಳ ಕಟ್ಟು ನಿಟ್ಟಿನ ಆಚರಣೆಯ ತಲೆ ಗೊಡೆಯೊಡ್ಡದಿದ್ದಲ್ಲಿ ಮುಂದೊಂದು ದಿನ ಕೊಡಗಿನಲ್ಲಿ ಕೊಡಗು ಗೌಡರಿದ್ದರೆ? ಎಂಬ

ಪ್ರತಿಯೊಂದು ಮತವು ಇತರ ಮತಗಳಂತೆ ಸತ್ವಯುತವಾದುದು. ಆದರೆ ಹಿಂದೂ ಧರ್ಮದಲ್ಲಿ ಅವೆಲ್ಲವನು ಕರಗಿಸಿಕೊಳ್ಳುವ ಶಕ್ತಿಯಿದೆ.

ಪ್ರಶ್ನೆ ಬೃಹದ್ಹಾಕಾರವಾಗಿ ಮುಂದಿನ ಪೀಳಿಗೆಯವರನ್ನು ಖಂಡಿತ ಕಾಡದಿರಲಾರದು.

ಈ ಹಿನ್ನಲೆಯಲ್ಲಿ ಶ್ರೀಮಂತಿಕೆಯಿಂದ ಸಂಪತ್ ಬರಿತವಾಗಿರುವ "ಕೊಡಗು ಗೌಡ" ಸಂಸ್ಕೃತಿಯನ್ನು ಗೌಡರು ಉಳಿಸಿ, ಬೆಳೆಸಿ ಪೋಷಿಸಬೇಕಾದರೆ ಗೌಡ ಸಂಘ ಸಮಾಜಗಳಿರುವ ಪ್ರತಿಯೊಂದು ಪ್ರದೇಶದಲ್ಲೂ ಹಳ್ಳಿಗಳಲ್ಲೂ ಕುಟುಂಬದ ಒಂದೊಂದು ಐನ್ ಮನೆಗಳು ನಿರ್ಮಾಣ ಜೀರ್ಣೋದ್ಧಾರ ಅಥವಾ ನವೀಕರಣ ಅತ್ಯಾವಶ್ಯಕ. ಅಲ್ಲದೆ ಈಗಿರುವ ಐನ್ ಮನೆಗಳಲ್ಲೂ ಮುಂದಾಗುವ ಐನ್ ಮನೆಗಳಲ್ಲೂ ಹಾಗೂ ಸಂಘ, ಸಮಾಜಗಳಲ್ಲೂ ಸಹ ನಡೆಯುವ ಕೊಡಗಿನ ಗೌಡ ಜನಾಂಗದ ಪ್ರತಿಯೊಂದು ಕಾರ್ಯಕ್ರಮಗಳು ಅವರ ಆಚಾರ ವಿಚಾರ ಪದ್ಧತಿ-ಪರಂಪರೆಗಳು ಶಾಸ್ತ್ರ-ಸಂಪ್ರದಾಯಗಳಿಂದ ಕೂಡಿರಲೇ ಬೇಕೆಂಬ ಕಟ್ಟು ಕಟ್ಟಲೆಗಳನ್ನು ಕಟ್ಟುನಿಟ್ಟಿನಿಂದ ಜಾರಿಗೆ ತರಲು ಜನಾಂಗದ ಹಿರಿಯರು ಹಾಗೂ ಮುಖಂಡರು ಕ್ರಮತೆಗೆದು ಕೊಳ್ಳಲೇ ಬೇಕಾದ ಕಾಲ ಈಗ ಬಂದೊದಗಿದೆ. ಈ ತೀರ್ಮಾನಗಳನ್ನು ದಿಕ್ಕರಿಸುವ ಯಾರೇ ಆಗಲಿ ಅಂತಹ ಗೌಡರ ವಿರುದ್ಧ ನಿರ್ದಾಕ್ಷಿಣ್ಯ ಹಾಗೂ ಕಠಿಣ ಕ್ರಮಗಳು ಅತ್ಯಾವಶ್ಯಕ. ಇಂತಹ ಶಿಸ್ತು ಬದ್ಧ ರೀತಿ ನೀತಿ ನಿಯಮಗಳನ್ನು ಜಾರಿಗೆ ತಾರದಿದ್ದಲ್ಲಿ ಗೌಡ ಜನಾಂಗ ಮತ್ತು ಅವರ ಪದ್ಧತಿ ಪರಂಪರೆಗಳು ಭವಿಷ್ಯದಲ್ಲಿ ಒಂದು ದಿನ ಶೂನ್ಯದಲ್ಲಿ ಕೊನೆಗೊಳ್ಳುವುದರಲ್ಲಿ ಸಂಶಯ ಇರಲಾರದು.

ಗೌಡ ಸಂಘ ಸಮಾಜಗಳಿರುವ ಪಟ್ಟಣಗಳಲ್ಲಿ ಒಂದೊಂದು ಐನ್ ಮನೆಗಳ ನಿರ್ಮಾಣ ಮಾಡಿ ಐನ್ ಮನೆಗಳಲ್ಲಿ ನಡೆಯುವ ಗೌಡರ ಎಲ್ಲಾ ಶಾಸ್ತ್ರ ಸಂಪ್ರದಾಯ ಪದ್ಧತಿ ಪರಂಪರೆಗಳನ್ನು ಆಚರಣೆಗೆ ತಂದಲ್ಲಿ, ಪಟ್ಟಣ ಪ್ರದೇಶದ ಲ್ಲಿರುವವರು ಗುರುಕಾರಣನವರಿಗೆ ಎಡೆ ಹಾಕಲಾಗಲೀ ಇನ್ನಾವುದೇ ಪದ್ಧತಿಯನ್ನು ಪಟ್ಟಣದಲ್ಲಿನ ಐನ್ ಮನೆಯಲ್ಲಿ ಆಚರಿಸಲು ಅನುಕೂಲವಾಗುವುದರ ಜತೆಗೆ ಹಣ ಹಾಗು ಸಮಯ ಎರಡನ್ನು ಮಿತಗೊಳಿಸಬಹುದಾಗಿದೆ. ಅಲ್ಲದೆ ಆಯಾ ಪ್ರದೇಶದಲ್ಲಿ ಗೌಡರು ಒಗ್ಗಟ್ಟಿನಿಂದ ಹಾಗೂ ಪದ್ಧತಿ ಪರಂಪರೆಗಳಿಗೆ ಲೋಪ ಬಾರದಂತೆ ವಿಜೃಂಭಣೆಯಿಂದ ಹಬ್ಬ ಹರಿದಿನಗಳನ್ನು ಆಚರಿಸಲು ಅನುಕೂಲಕರ ವಾತಾವರಣ ಸೃಷ್ಟಿಯಾಗುವುದಲ್ಲದೆ ಗೌಡರ ಪಾರಂಪರಾಗತವಾಗಿ ಬಂದ ಸಂಪ್ರದಾಯಗಳನ್ನು ಮುಂದುವರಿಸಿ ಕೊಂಡು ಹೋಗಲು ವೇದಿಕೆಯಾಗುವುದು ಕಟು ಸತ್ಯ. ಇಂತಹ ಆಚಾರ ವಿಚಾರಗಳನ್ನು ಅಮೂಲಾಗ್ರವಾಗಿ ಜಾರಿಗೆ ತರುವಲ್ಲಿ ಕೆಲವು "ವೈಟ್ ಕಾಲರ್" ಗೌಡ ಪ್ರತಿಕ್ರಿಯೆ ಏನೆಂದು ಹೇಳಲು ಸಾಧ್ಯವಿಲ್ಲ. ಜಗತ್ತಿನಾದ್ಯಂತ ವಿರುದ್ಧ ಎಲ್ಲಾ ಜನಾಂಗದವರಲ್ಲೂ ನಾವು ಧನಿಕರು, ನಾವೇ ಎಲ್ಲರಿಗಿಂತಲೂ ಮೇಲು, ನಾವು ನಡೆದದ್ದೆ ಆಚಾರ ವಿಚಾರಗಳೆಂದು ಹೇಳುವ ವೈಟ್ ಕಾಲರ್ ಜನರು ಇದ್ದೇ ಇರುತ್ತಾರೆ. ಅಂದ ಮೇಲೆ ನಮ್ಮ ಗೌಡರಲ್ಲೂ ಅಂತವರಿಲ್ಲ ವೆಂಬುದನ್ನು ನಾವು ಬಲ್ಲೆವು. ಆದುದರಿಂದ ಇದಕ್ಕೆ ಯಾರು ಏನೂ ಯೋಚಿಸಬೇಕಾಗಿಲ್ಲ. ಯಾಕೆಂದರೆ ಇಂತವರ ಸಂಖ್ಯೆ ಬಹು ವಿರಳ. ಒಂದಲ್ಲ ಒಂದು ದಿನ ಅವರು ಮುಖ್ಯ ವಾಹಿನಿಗೆ ಬರಲೇ ಬೇಕು. ಬಂದೇ ಬರುತ್ತಾರೆ. ಹೀಗಿರುವಾಗ ಗೌಡರ ಏಳಿಗೆ ಪಥದಲ್ಲಿ ಮುಂದುವರಿಯಲು ಯಾವುದೇ ರಚನಾತ್ಮಕ ಕಾರ್ಯಕ್ರಮಗಳನ್ನು ಕೈಗೊಂಡಲ್ಲಿ ಏನೇ ಬಂದರು ಅದನ್ನು ಎದುರಿಸಿ ನಿಲ್ಲುವ ಶಕ್ತಿಯನ್ನು ಗಂಡದೆಯ ಗುಂಡಿಗೆಯ ಗೌಡರು ಒಗ್ಗಟ್ಟಿನಿಂದ ಎದುರಿಸಿ ನಿಂತಲ್ಲಿ ಅದೇ ಅವರಿಗೆ ಶ್ರೀ ರಕ್ಷೆ ಅಲ್ಲದೆ ಬೆಟ್ಟದಂತೆ ಎದುರಾಗುವ ಸಮಸ್ಯೆಗಳು ಮಂಜಿನಂತೆ ಕರಗಿ ಹೋಗುವುದು.

ಮೈಸೂರಿನಲ್ಲಿ ಕೊಡಗು ಗೌಡ ಜನಾಂಗದವರಿಗೆ ಈಗಾಗಲೇಒಂದು ನಿವೇಶನ ಮಂಜೂರಾಗಿದ್ದು ಆ ನಿವೇಶನದಲ್ಲಿ ಆ ನಿವೇಶನದಲ್ಲಿ ಈ ಮೇಲೆ ಹೇಳಿದಂತೆ ಒಂದು ಐನ್ ಮನೆಯ ನಿರ್ಮಾಣಕ್ಕೆ ಎಲ್ಲಾ ಆಯಾಮಗಳಿಂದ ರಂಗಸಜ್ಜಿಕೆಯ ಹಂತದಲ್ಲಿದೆ ಎಂಬುದನ್ನು ಸಂತಸ ವಿಷಯವಾಗಿದೆ.

ಗೌಡ ಸಂಘ, ಸಮಾಜಗಳಿರುವ ಪ್ರದೇಶಗಳಲ್ಲಿ ಐನ್ ಮನೆಯ ನಿರ್ಮಾಣ ಕೈಗೆತ್ತಿಕೊಳ್ಳುವ ಮೊದಲು ಗೌಡ ಜನಾಂಗದ ಸಂಘ ಸಮಾಜಗಳ ಮುಖಂಡರೆಲ್ಲರೂ ಹಾಗೂ ಜನಾಂಗ ಹಿರಿಯರೆಲ್ಲರೂ ಒಂದೆಡೆ ಸೇರಿ ಸಭೆ ನಡೆಸಿ ಮಡಿಕೇರಿ ತಾಲ್ಲೂಕು ಭಾಗಮಂಡಲ ನಾಡಿನ ಕರಿಕೆಗೆ ಹೋಗುವ ತಣ್ಣಿ ಮಾನಿ ಗ್ರಾಮದ ಹಕ್ಕಿಕಂಡಿಯ ಹತ್ತಿರ ದೊಡ್ಡ ತಳಾರ (ಮುಡೆತ್ ಮಲೆಯ ಹತ್ತಿರ) ಎಂಬ ಸ್ಥಳದಲ್ಲಿ ಹತ್ತು ಕುಟುಂಬ ಹದಿನೆಂಟು ಗೋತ್ರದ ಗೌಡರಿಗೆ ಗೋತ್ರ ಒಂದಕ್ಕೆ ಒಂದು ಏಕ್ರೆಯಂತೆ ಹದಿನೆಂಟು ಏಕ್ರೆ ಜಾಗ ಪಡೆದು ಅಲ್ಲಿ ಕೊಡಗು ಗೌಡರ ಐನ್ ಮನೆಯ ನಿರ್ಮಾಣ ಅತೀ ಜರೂರಾಗಿ ನಡೆಸಿದರೆ ಅದೇ ಗೌಡರ ಏಳಿಗೆಗೆ ಹಾಗೂ ಆಚಾರ ವಿಚಾರಗಳಿಗೆ ಮೊದಲ ಸೋಪಾನ. ಈ ಮೇಲೆ ಹೇಳಿದ ಸ್ಥಳ ಬ್ರಹ್ಮಗಿರಿ ಬೆಟ್ಟದ ಪೂರ್ವೋತ್ತರಕ್ಕಿದ್ದು ಈ ಸ್ಥಳಕ್ಕೆ ಗೌಡ ಗಿರಿ ಎಂದು ನಾಮಕರಣ ಮಾಡಿದರೆ ಸೂಕ್ತ. ಈ ಗೌಡ ಗಿರಿಯ ಐನ್ ಮನೆಯಲ್ಲಿ ಗೌಡರ ಸರ್ವಾಂಗೀಣ ಅಭಿವೃದ್ಧಿಗೆ ಹಾಗೂ ಅವರ ಪಾರಂಪರ್ಯ ಪದ್ಧತಿ ಮತ್ತು ಸಂಸ್ಕೃತಿಯ ಶಾಸ್ತ್ರ ಸಂಪ್ರದಾಯಗಳನ್ನು ಜಗತ್ತಿನಾದ್ಯಂತ ಪಸರಿಸುವಂತಾಗಿಸಲು ನಾಂದಿ ಹಾಡೋಣ.

ಈ ಐನ್ ಮನೆಯ ನಿರ್ಮಾಣಕ್ಕೆ ಬೇಕಾದ ಆರ್ಥಿಕ ವ್ಯವಸ್ಥೆಯ ಬಗ್ಗೆ ಏನೆಂಬ ಪ್ರಶ್ನೆಯೇ? ಇದು ಸಹಜ. ಆದರೆ ಶಿಸ್ತು ಬದ್ಧವಾದ ಹಾದಿಯಲ್ಲಿ ಮುಂದುವರಿದರೆ ಅಲ್ಲದೆ ಕಟ್ಟುನಿಟ್ಟಿನ ಕ್ರಮ ತೆಗೆದುಕೊಂಡಲ್ಲಿ ಎಲ್ಲೂ ಸುಲಲಿತ. ಕೊಡಗಿನಲ್ಲಿ ಪ್ರತಿಯೊಂದು ಗೌಡ ಕುಟುಂಬದವರು ಒಂದೊಂದು ಮನೆಗೆ ರೂ. 500/- ರಂತೆ ಕಡ್ಡಾಯವಾಗಿ ಪಾವತಿಸಲೇ ಬೇಕೆಂದು ನಿರ್ಬಂಧ ವಿದಿಸಿದಲ್ಲಿ ಮುಂದೆ ದಾರಿ ಸುಗಮವಾಗಬಹುದೆಂದೆನಿಸುವುದು.

ನಿತ್ಯ ನೂತನೆಯ ಲೋಕ ಪಾವನೆಯೂ ಜಗನ್ಮಾತೆಯು ಜಗನ್ ಮಂಗಲೆಯು, ದಕ್ಷಿಣ ಗಂಗೆಯು ಆದ ಕಾವೇರಿ ಮಾತೆ ಇದೊ ನಿನಗೆ ನನ್ನ ಹೃದಯಾಂತರಾದ ನಮನಗಳು. ಗೌಡರನ್ನು ಹರಸುತಾಯೇ.

-ಅಮೆಕೃಷ್ಣಪ್ಪ ಶಿವರಾಯ್, ಮೈಸೂರು.

---

5 ನೇ ಪುಟದಿಂದ

ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ ಮಾಜಿ ಕಾರ್ಯದರ್ಶಿ ಕೋಡಿ ಚಂದ್ರಶೇಖರ್, ಸಮಾಜ ಚಿಂತಕ ಬೈತಡ್ಕ ಬೆಳ್ಯಪ್ಪ, ಕೊಡಗು ಸಂಗಾತಿ ಬಳಗದ ಮಂಜ್ಞಂಡ್ರ ರಮೇಶ್, ಬೈನೆರವನ ಇಂದ್ರಕುಮಾರ್ ಹಾಗೂ ಸೆಟ್ಟೆಜನ ನರೇಂದ್ರ ಇವರು ವೀಕ್ಷಕರಾಗಿದ್ದಲ್ಲದೆ, ಸುಮಾರು ನೂರಕ್ಕೂ ಹೆಚ್ಚು ತಾಲ್ಲೂಕಿನ ಗೌಡ ಬಂಧುಗಳು ಅಂದು ಆಗಮಿಸಿ ಸಹಕರಿಸಿದ್ದುದನ್ನು ಇಲ್ಲಿಂದು ಸ್ಮರಿಸಬಹುದು.

ವರದಿ ಲೇಖನ : ಪಟ್ಟಡ ಪ್ರಭಾಕರ

---

# ವಿದ್ಯಾರ್ಥಿಗಳೇ ಆತ್ಮಬಲವೇ ನಿಮಗಾಶ್ರಯ.

ಪ್ರಾಣಿ ಜಗತ್ತಿನಲ್ಲಿ ಮಾನವನಿಗೆ ತನ್ನದೇ ಆದ ವಿಶಿಷ್ಟವಾದ ಸ್ಥಾನ ಇದೆ. ಆತ ಇತರೆ ಪ್ರಾಣಿಗಳಿಂದ ವಿಭಿನ್ನ ಎನಿಸಿಕೊಂಡಿದ್ದಾನೆ. ಅದಕ್ಕೆ ಅವನ ವಿಶೇಷವಾದ ಗುಣಗಳೇ ಕಾರಣ. ಆ ಗುಣಗಳು ಅವನನ್ನು ಇಂದು ನಾಗರೀಕನನ್ನಾಗಿ ಮಾಡಿದೆ. ಅಲ್ಲದೆ ಅವನು ಇಂದಿನ ಪ್ರಪಂಚವನ್ನು ಅರಿಯುವಂತೆ ಮಾಡಿದ. ಅವನ ಈ ಎಲ್ಲಾ ಸಾಧನೆ ಬದಲಾವಣೆಗಳಿಗೆ ಕಾರಣ ಶಿಕ್ಷಣ.

ಇಂದಿನ ಸ್ಪರ್ಧಾತ್ಮಕ ಪ್ರಪಂಚದಲ್ಲಿ ಶಿಕ್ಷಣ ಅಗತ್ಯ ಅಲ್ಲ. ಅದು 'ಅನಿವಾರ್ಯ' ಇಂತಹ ಶಿಕ್ಷಣ ಇಂದಿನ ವಿದ್ಯಾರ್ಥಿಗಳ ದೃಷ್ಟಿಯಲ್ಲಿ ಒಂದೊಂದು ರೀತಿ ಆಗಿದೆ. ' Education is a Fashion, Education is a Timepass' ಎನ್ನುವ ಅನೇಕ ವಿದ್ಯಾರ್ಥಿಗಳು ನಮ್ಮಲ್ಲಿ ಇಲ್ಲ ಎಂದು ಸಮರ್ಥಿಸಿಕೊಳ್ಳುವ ಸ್ಥಿತಿಯಲ್ಲಿ ನಾವು ಇಲ್ಲ. ಶಿಕ್ಷಣ ಒಂದು ಸುಂದರವಾದ ಅನುಭವ It is a beautiful experience ಎಂದು ಹೇಳಿರುವ ಅನೇಕ ಶಿಕ್ಷಣ ತಜ್ಞರಿದ್ದಾರೆ. "Yes" ಅದು ನಿಜಕ್ಕೂ ಸತ್ಯವಾದ ಮಾತು. ಹೇಗೆಂದರೆ ಒಂದು ಸುಂದರವಾದ ನಿಸರ್ಗದ ವರ್ಣನೆಯನ್ನು ಕವಿ ಉತ್ತಮ ರೀತಿಯಲ್ಲಿ ವರ್ಣಿಸಿದ್ದು ಅದನ್ನು ಸವಿಯುವ ಅರಿಯುವ ಮನಸ್ಸು ನಮ್ಮಲ್ಲಿ ಇದ್ದರೆ ನಾವು ಆ ಪ್ರದೇಶಕ್ಕೆ ಹೋದ ಸುಂದರ ಅನುಭವ ಪಡೆಯಬಲ್ಲವು. ಅಂತಹ ಶಕ್ತಿ ಬರವಣಿಗೆ ಇದೆ.

ಇಂತಹ ಅನುಭವ ಕೊಡುವ ಶಿಕ್ಷಣವನ್ನು ಪಡೆಯಲು ಇಂದಿನ ಅನೇಕ ವಿದ್ಯಾರ್ಥಿಗಳು ಸೋಲುತ್ತಿದ್ದಾರೆ. ಇವರಲ್ಲಿ ನಾವು ಎರಡು ಗುಂಪುಗಳನ್ನು ಮಾಡಬಹುದು i) ಸೌಲಭ್ಯಗಳ ಕೊರತೆಯುಳ್ಳವರು. ii) ಸೌಲಭ್ಯ ಇದ್ದರೂ ಓದುವಲ್ಲಿ ಸೋಲುವವರು ಮೊದಲನೇ ಗುಂಪಿಗೆ ಸೇರಿದವರ ಚರ್ಚೆಗೆ ಹೋದರೆ ಅವರಿಗೆ ಭೌತಿಕ ಸೌಲಭ್ಯದ ಕೊರತೆ ಇರುತ್ತದೆ. ಆದರೆ ಎರಡನೇ ಗುಂಪಿನವರಿಗೆ ಸೇರಿದವರಲ್ಲಿ ನಾವು ಕಾಣುವುದು 'ಮಾನಸಿಕತ ಸ್ಥೈರ್ಯ'ದ ಕೊರತೆ. ಅವರು ಓದಲು ಪ್ರಾರಂಭಿಸುವುದಕ್ಕೆ ಮುಂಚೆಯೇ ಸೋತಿರುತ್ತಾರೆ. ನಾನು Pass ಆಗುವೆನಾ ಎಂಬ ಅನುಮಾನ ಪ್ರಾರಂಭದಲ್ಲಿಯೇ ಅವರಲ್ಲಿ ಮೂಡಿರುತ್ತದೆ. ಅದಕ್ಕೆ ಅವರು ಬೆಳೆದ ವಾತಾವರಣ ಅಥವಾ ಅವರ ಮೇಲೆ ಬೀರಿದ ಅನೇಕ ಘಟನೆಗಳು ಕಾರಣ ಇರಬಹುದು. ಓದಲು ಪ್ರಾರಂಭಿಸುವ ಮೊದಲನೆ ಪುಟದಲ್ಲೇ ಎಡವುವ ಅವರು ಪರೀಕ್ಷೆ ಎಂಬ ಕೊನೆ ಪುಟವನ್ನು ತಲುಪುವುದಿರಲಿ ನೋಡುವುದೇ ಇಲ್ಲ. ಇವೆಲ್ಲವನ್ನು ಮೀರಿನಿಲ್ಲುವ ಮುಖ್ಯ ಕಾರಣ ಅವರಲ್ಲಿ " ನನ್ನಿಂದ ಇದು ಸಾಧ್ಯ, ನಾನು ಮಾಡಬಲ್ಲೆ" ಎಂಬ ಧೃಡ ನಿರ್ಧಾರ ಇಲ್ಲದೆ ಇರೋದು. ಇನ್ನೂ ಕೆಲವು ವಿದ್ಯಾರ್ಥಿಗಳಿಗೆ ನಾನು ಓದುವ ಅಗತ್ಯ ಇಲ್ಲ ಯಾಕೆಂದ್ರೆ ನನ್ನತ್ರ ದುಡ್ಡು ಇದೆ ಎಂಬ ಭಾವನೆ ಇರಬಹುದು. ಆದರೆ ನೆನಪಿರಲಿ "Money can buy a luxuries, but not culture, Money can buy position but not greatness, "Money can buy books but not braine" ಎಂಬ ಅಂಶಗಳು ಅಂತಹ ವಿದ್ಯಾರ್ಥಿಗಳಿಗೆ ತಿಳಿದೇ ಇರುವುದಿಲ್ಲ. ಅವನು ನನ್ನಂತೆ ಪಾಠ ಕೇಳುತ್ತಾನೆ. ಅವನು I RAnk, ನಾನು ಮಾತ್ರ Fail ಯಾಕೆ? ಅಂತ ನಮಗೆ ನಾವೇ ಪ್ರಶ್ನೆ ಹಾಕೊಳ್ಳೊವರೆಗೂ ನಾವು ಆ fail ಎಂಬ ಅಂಶ ಪರೀಕ್ಷೆ ಮಾತ್ರ ಅಲ್ಲದೆ ಜೀವನಕ್ಕೂ ಬರುತ್ತದೆ. ಯಾಕಂದ್ರೆ ಅವನಿಗೆ ಸಾಧಿಸುವ ಛಲ ಇದೆ. ಸಾಧಿಸಲೇ ಬೇಕು ಎಂಬ ಹಟ ಇದೆ. ಅವನಿಂದ ಆಗೋದು ನನ್ನಿಂದ ಯಾಕೆ ಸಾಧ್ಯವಿಲ್ಲ ಎಂದು ನಾವು ನಿರ್ಧರಿಸಿದಾಗಲೆ ಅವನಂತೆ ಅಥವಾ ಕೆಲವೊಮ್ಮೆ ಅವನನ್ನು ಮೀರಿಸುವ ದೈತ್ಯ ಶಕ್ತಿಯಾಗಿ ನಾವು ಬೆಳೆಯಬಲ್ಲವು.

ಸ್ನೇಹಿತರೇ, ನಾನು ನಿಮ್ಮನ್ನು ಗಾಂಧಿ ಆಗಿ ವಿಶ್ವೇಶ್ವರ ಯ್ಯನ ತರಹ ಅದ್ಭುತ ಇಂಜಿನಿಯರ್ ಆಗಿ, ಏಸುವಿನ ತರಹ ವಿಶ್ವಜ್ಯೋತಿ ಆಗಿ ಅಥವಾ ಮದರ್ ತೆರೇಸಾ ತರಹ ಮಹಾನ್ ತಾಯಿ ಆಗಿ ಅಂತ ಹೇಳುತ್ತಿಲ್ಲ. ಗಾಂಧಿ ಆಗದಿದ್ದರೂ ಪರವಾಗಿಲ್ಲ ಆದರೆ ಗೋಡ್ಸೆ ಆಗದಿರಿ. ಭಾರತದ ಪ್ರೀತಿಯ ಕಲ್ಪನಾ ಚಾವ್ಲಾ ಆಗಿರಿ. ಇಂದಿರಾ ಗಾಂಧಿಯ ರೀತಿಯ 'Super Women' ಆಗುವ ದಾರಿಯಲ್ಲಿ ಕ್ರಮಿಸ್ಸಿ ಇದ್ಯಾವುದು ಆಗಲಿಲ್ಲವೆಂದರೂ because a good children to your parents. ಪೋಷಕರೂ ಸಹ ಮಕ್ಕಳು ಸೋತಾಗ ಅವರ ಮೇಲೆ ಸಹಾನುಭೂತಿ ತೋರಿಸುವ ಬದಲು ಅವರಿಗೆ ಸ್ಥೈರ್ಯ ತುಂಬಬೇಕು.

"Friends you cann't be a star in the sky. Atleast be a lamp in your home. Nobody can destroy you, You will get Rank in life . Just go, all the Best."

ಯಾಕೆಂದ್ರೆ ಜೀವನದಲ್ಲಿ ಪರೀಕ್ಷೆಯೂ ಸೇರಿದಂತೆ ಎಲ್ಲಾ ಅಂಶದಲ್ಲೂ ಆತ್ಮಬಲವೇ ಎಂದು ನಿಮಗೆ ಆಸರೆ. ನಿಮಗೆ ಸಾಧಿಸುವೆನೆಂಬ ಛಲ ಹಿಮಾಲಯದಂತೆ ಅಚಲವಾಗಿರಲಿ, ನಿಸರ್ಗದೇವಿಯಂತೆ ನಿತ್ಯ ಹೊಸತಾಗಿರಲಿ,

goodluck for your future "ವಿದ್ಯೆ ಸಾಧಕನಿಗೆ ಅಲ್ಲದೆ ಸೋಮಾರಿಗೆ ಒಲಿಯದು" ನಹೀ ಜ್ಞಾನೇನ ಸದೃಶಂ"(ಜ್ಞಾನಕ್ಕೆ ಸಮನಾದುದು ಯಾವುದೂ ಇಲ್ಲ)

Note : Little learning is dangerous. We become intelligent not just by studing but by understanding.

- ಬಿಂದ್ಯಾ, ಮೈಸೂರು.

ಸಾಧಾರಣ ಮಾನವನು ಧರ್ಮದ ಬಗ್ಗೆ ಹೆಚ್ಚು ಮಾತನಾಡುತ್ತಾನೆ. ಆದರೆ ಅದರಂತೆ ನಡೆದುಕೊಳ್ಳಲಾರ.

## 'ಕೋಪವೆಂಬುದು ಅನರ್ಥ ಸಾಧನ'

ಕೋಪವು ಮನಸ್ಸಿನ ಒಂದು ವಿಕಾರ, ವಿಲಕ್ಷಣ ಸ್ಥಿತಿ. ಮನುಷ್ಯನ ಮನಸ್ಸಿಗೆ ನೋವು ಉಂಟಾದಾಗ ಆಸೆ-ಆಕಾಂಕ್ಷೆಗಳು ನೆರವೇರದಿದ್ದಾಗ, ಗೌರವಕ್ಕೆ ದಕ್ಕೆ ಉಂಟಾದಾಗ ಇದ್ದಕ್ಕಿದ್ದಂತೆಯೇ ಕೋಪ ಬರುತ್ತದೆ. ಕೋಪವೆಂಬುದು ಯಾವ ಸಮಯದಲ್ಲಿ ಯಾರ ನಡುವೆ ಬರುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಒಂದೊಂದು ಬಾರಿ ನಮ್ಮ ಹತೋಟಿ ಮೀರಿ ಅನೇಕ ಅನಾಹುತಗಳು ಜರುಗುವುದುಂಟು. ಕೋಪ ಎಲ್ಲಾ ಅನರ್ಥಕ್ಕೂ ಕಾರಣವಾಗಿದೆ.

ಕೋಪ ಬಂದಾಗ ಹುಬ್ಬುಗಂಟು ಹಾಕಿಕೊಳ್ಳುತ್ತೇವೆ. ಹಲ್ಲು ಕಡಿಯುವುದು, ಕಣ್ಣು ಕೆಂಪಾಗುವ, ಮುಖ ಕೆಂಪಗಾಗುವ ಮುಖ ಭಾವನೆಗಳು ಹಾದು ಹೋಗುತ್ತವೆ. ಕೋಪ ಬಂದಾಗ ಮನುಷ್ಯ ತನ್ನ ಇಚ್ಛೆ ಬಂದಂತೆ ವರ್ತಿಸುತ್ತಾನೆ. ಅವನಿಗೆ ಮುಂದಾಲೋಚನೆ ಇರುವುದಿಲ್ಲ. ಆದ್ದರಿಂದಲೇ ಅನಾಹುತಗಳು ಸಂಭವಿಸುತ್ತವೆ. "ಕೋಪವನ್ನು ಅಲ್ಪಕಾಲದ ಹುಚ್ಚು" ಎಂದು ಹೊರೇಸ್ ಎಂಬ ತತ್ವಜ್ಞಾನಿ ಹೇಳಿದ್ದಾನೆ. ಕೋಪದಿಂದ ಆಗುವ ಅನರ್ಥಗಳಿಗೆ ಪುರಾಣ ಇತಿಹಾಸಗಳಲ್ಲಿ ಅನೇಕ ಉದಾ ಹರಣೆಗಳು ದೊರಕುತ್ತವೆ. ರಾಘವಂಕನ ಹರಿಶ್ಚಂದ್ರನ ಕಾವ್ಯದಲ್ಲಿ, ವಿಶ್ವ ಮಿತ್ರನ ಕೋಪ ಎಂತಹುದೆಂದು ಕವಿ ಪರಿಚಯಿಸಿದ್ದಾನೆ. ಇದರಿಂದ ಋಷಿಗೆ ಸಹಜವಾದ ಯೋಗ, ದಯೆ,ಕರುಣೆ ಇಲ್ಲವಾಯಿತು. ಜಪ ಜಾರಿತು ತಪ ತಗ್ಗಿತು. ನೀತಿ ಒಣಗಿತು. ಕೋಪದಲ್ಲಿ ಕೊಯ್ದ ಮೂಗು, ಶಾಂತವಾದ ಮೇಲೆ ಬರುತ್ತದೆಯೇ?ಈ ರೀತಿ ವರ್ತನೆಯಿಂದ ಆಗುವ ಪ್ರಯೋಜನವಾದರೂ ಏನು? ಹೀಗೆ ಕೋಪದಿಂದ ಉದ್ರೇಕಗೊಂಡ ಮನಸ್ಸು ಶಾಂತವಾದ ಮೇಲೆ ತಾನೂ ಕೈಗೊಂಡ ಕಾರ್‍ಯಕ್ಕೆ ಪಾಶ್ಚಾತ್ತಾಪ ಪಡುತ್ತದೆ. ಆದರೆ ಆಗ ಎಲ್ಲ ಮುಗಿದು ಹೋದ ಕಥೆಯಾಗಿರುತ್ತದೆ.

ಕೋಪದಲ್ಲಿ ಹುಸಿಕೋಪ, ಮುಂಗೋಪ, ಪ್ರಣಯಕೋಪ, ಸಾಧ್ವಿಕ ಕೋಪ, ಉಗ್ರಕೋಪ ಮುಂತಾದ ಅನೇಕ ರೀತಿಗಳಿವೆ. ಇದರಲ್ಲಿ ಮುಂಗೋಪ ಮತ್ತು ಉಗ್ರಕೋಪಗಳು ಮನುಷ್ಯನ ವಿವೇಚನಾ ಶಕ್ತಿಯನ್ನು ನುಂಗಿ ಹಾಕುತ್ತವೆ. ಇವು ಅಸಂಸ್ಕೃತಿಯ ಅನಾಗರೀಕತೆಯ ಕುರುಹುಗಳು ಎನ್ನಬಹುದು. ಇದರ ಪರಿಣಾಮ ಉಗ್ರವಾದುದು. ಆದ್ದರಿಂದಲೇ ಶರಣರು "ತನುವಿನ ಕೋಪ ಹಿರಿತನದ ಕೇಡು, ಮನದ ಕೋಪ ತನ್ನ ಅರುಹಿನ ಕೇಡು" ಎಂದು ಹೇಳಿದ್ದಾರೆ. ಕೋಪದಿಂದ ದ್ವೇಷ, ಛಲ, ಮತ್ಸರಾಧಿಗಳು ಬೆಳೆದು ಮುಂದೆ ಆಗುವ ಅನರ್ಥಗಳಿಗೆ ಕಾರಣವಾಗುತ್ತದೆ. ಆದ್ದರಿಂದ ಕೋಪ ಬಂದಾಗ ನಮ್ಮ ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡು, ಆದಷ್ಟು ತಾಳ್ಮೆಯಿಂದ ಕೋಪವನ್ನು ನುಂಗಿಕೊಳ್ಳಬೇಕು. ಇದರಿಂದ ಎಷ್ಟೋ ಅನಾಹುತಗಳನ್ನು ತಪ್ಪಿಸಬಹುದು. "ತಾಳಿದವನು ಬಾಳಿಯಾನು" ಎಂಬ ಗಾದೆ ಮಾತನ್ನು ನಾವು, ನೀವೆಲ್ಲರೂ ಕೇಳಿದ್ದೇವೆ, ಓದಿದ್ದೇವೆ ಅದರಂತೆ ನಡೆಯೋಣ. ವೇದ ಸುಳ್ಳಾದರೂ, ಗಾದೆ ಸುಳ್ಳಾಗದು. ಕೋಪದ ಅನರ್ಥಗಳಿಗೆ ಇದೊಂದೇ ಮದ್ದು ಎಂಬುದು ನನ್ನ ಅನಿಸಿಕೆ.

**-ತುಮ್ಮಜ್ಜೀರ ಲತಾ ಉಲ್ಲಾಸ್, ಹಿನಕಲ್, ಮೈಸೂರು**

## ಪತ್ರ ವಿಭಾಗ -1

***ಪ್ರೀತಿಯ ಶೀಲಾಮಣಿ ಅಕ್ಕಯ್ಯನವರಿಗೆ,***

ಕೊಡಗು ಸಂಗಾತಿ ಏಪ್ರಿಲ್ 1ರಿಂದ 30 ಪತ್ರಿಕೆಯಲ್ಲಿ ಪುಟ 2 ರಲ್ಲಿ ಗೌಡ ಜನಾಂಗಕ್ಕೆ ಒಂದ್ ಬರಹಗಾರ ಕೂಟ ಬೇಕ್ ಎಂಬ ನಿಮ್ಮ ಅನಿಸಿಕೆಯನ್ನು ಕಂಡು, ಓದಿ, ಸಂತಸಪಟ್ಟೆನು. ಕೊಡವ ಭಾಷೆಯನ್ನು ಸಾರ್ವಜನಿಕಗೊಳಿಸಲು ಬರಹಗಾರರನ್ನು ಗುರ್ತಿಸಲು ಕೊಡವ ಸಾಹಿತ್ಯವನ್ನು ವಿಸ್ತರಿಸಲು ಹಲವು ವರ್ಷಗಳಿಂದ "ಕೊಡವ ತಕ್ಕ್ ಎಳ್ತ್‌ಕಾರಡ ಕೂಟ (ರಿ) ಕೆಲಸ ಮಾಡುತ್ತಿದೆ. ಸುರುವಿನಲ್ಲಿ ಎಲ್ಲರಿಗೂ ಒಂದು ಅನುಮಾನವಿತ್ತು. ಆದರೆ ಕಾರ್ಯಕರ್ತರು ಎದೆಗುಂದಲಿಲ್ಲ ಕೈಯಲ್ಲಿ ಕಾಸಿರಲಿಲ್ಲ. ಆದರೆ ಕೊಡವ ತಕ್ಕ್ ಪೆಳ್ತ್ ಮುಂದಕ್ಕೆ ಬರಬೇಕೆಂಬ ಛಲದಿಂದ ದುಡಿದರು. ಇಂದೂ ದುಡಿಯು ತ್ತಿರುವರು. ಅದರ ಫಲಿತಾಂಶವಾಗಿ ಇಂದು ಕೊಡವತಕ್ಕ್ ಎಳ್ತ್‌ಕಾರಡ ಕೂಟ (ರಿ) ತಿಂಗಳಿಗೊಂದು ಪ್ರತೀ ತಿಂಗಳ 25 ನೇ ತಾರೀಖಿನಂದು ಹೊಸ ಪುಸ್ತಕವನ್ನು ಬಿಡುಗಡೆಗೊಳಿಸುತ್ತಿದ್ದಾರೆ. ಇದಕ್ಕೆ ಹಣ (Sponsers) ಪ್ರತಿ ತಿಂಗಳು ತಾನಾಗಿಯೇ ಹರಿದು ಬರುತ್ತಿದೆ. ಹಾಗೆಯೇ ಬರಹಗಾರರೂ ಬರಹ ಬರೆಯುತ್ತಲೇ ಇರುತ್ತಾರೆ. ತಿಂಗಳಿಗೊಂದು ಪುಸ್ತಕ ಹೊರ ತರುವುದು ಸಾಮಾನ್ಯ ಕಾರ್ಯವಲ್ಲ. ದಣಿದು ದುಡಿಯಬೇಕು.

ಈ ಪತ್ರ ನಿಮ್ಮನ್ನು ಗೌಡ ಜನಾಂಗವನ್ನು ಪ್ರೋತ್ಸಾಹಿಸುವ ಸಲುವಾಗಿ ಬರೆಯುತ್ತಿರುವೆನು. ನಿಮ್ಮ ಶ್ರಮ, ಸಾಹಸ, ಆಸೆ ಆದಷ್ಟು ಬೇಗ ಈಡೇರಲೆಂದು ಬಯಸುತ್ತೇನೆ.

ನಮ್ಮ ಸಂಸ್ಕೃತಿ, ಸಾಹಿತ್ಯವನ್ನು ನಾವೇ ಕಲಿತು, ಬೆಳಸಿ, ಪ್ರಸರಿಸಬೇಕು. ಅರೆಭಾಷಿಕ ಜನಾಂಗದವರು ಶುದ್ಧ ಮನಸ್ಸಿನಿಂದ ಮುನ್ನುಗ್ಗುವರೆಂದು ಭಾವಿಸುತ್ತೇನೆ, ಶುಭವಾಗಲಿ.

ನಿಮ್ಮ ಶ್ರಮದ ಆಲೋಚನೆಗೆ ದೇವರು ಆಶೀರ್ವದಿಸಲಿ.

**ಇಂತೀ ನಿಮ್ಮವ, ಚೇಂದ್ರಿಮಾಡ ಗ. ಮುತ್ತಪ್ಪ, ಕುಶಾಲನಗರ.**

## ಪತ್ರ ವಿಭಾಗ - 2

**ಪತ್ರಿಕೆಯ ಬಗ್ಗೆ ಅನಿಸಿಕೆ:** ಗೌಡ ಜನಾಂಗದ ಅಭಿವೃದ್ಧಿಗೆ 'ಕೊಡಗು ಸಂಗಾತಿ'ಯಂತ ಪತ್ರಿಕೆ ಅತ್ಯವಶ್ಯಕ

ಕೊಡಗು ಸಂಗಾತಿ ಪತ್ರಿಕೆ ಕಳೆದ ಏಳು ವರ್ಷಗಳಿಂದ ಅವಿರತವಾಗಿ ದುಡಿಯುತ್ತಿದೆ. ಪ್ರತಿ ತಿಂಗಳ ಪತ್ರಿಕೆಯನ್ನು ಕೂತೂಹಲದಿಂದ ಕಾದು ಓದುತ್ತಿರುವ ಓದುಗರಲ್ಲಿ ನಾನೂ ಒಬ್ಬನು ಎಂದು ಹೇಳಿಕೊಳ್ಳಲು ನನಗೆ ಹೆಮ್ಮೆಯೆನಿಸುತ್ತಿದೆ. ನಮ್ಮ ಜನಾಂಗದಲ್ಲಿ ಏನು ನಡೆಯುತ್ತಿದೆ? ಯಾರ್‍ಯಾರು ಹೇಗೆಗೆ? ಎಲ್ಲೆಲ್ಲಿ ಇದ್ದಾರೆ? ಏನೇನು ಕೆಲಸ ಮಾಡಿದ್ದಾರೆ? ನಮ್ಮ ಸಂಪ್ರದಾಯ ಏನು? ಅವುಗಳ ಪ್ರಾಮುಖ್ಯತೆ ಏನು? ಅರೆಭಾಷೆಯಲ್ಲೂ ಸಾಹಿತ್ಯ ಸಾಧ್ಯ- ಇತ್ಯಾದಿ ಹತ್ತು ಹಲವು ವಿಚಾರಗಳನ್ನು ಪತ್ರಿಕೆಯೊಳಗೆ ಜೋಡಿಸಿ ಎಲ್ಲರಿಗೂ ಹಂಚುವ ಕಾರ್ಯ ಸುಲಭ ವಾದದ್ದೇನಲ್ಲ. ಶ್ರೀಮತಿ ಮತ್ತು ಶ್ರೀ ಪಟ್ಟಡ ಪ್ರಭಾಕರ, ಶೀಲಾ ಮಣಿ ದಂಪತಿಗಳಿಗೆ ಹಾಗೂ ಸಂಗಾತಿ ಪತ್ರಿಕೆಯ ಕಾರ್ಯಕರ್ತರಿಗೆಲ್ಲರಿಗೂ ಹಾರ್ದಿಕ ಅಭಿನಂದನೆಗಳು.

ನಮ್ಮ ಜನಾಂಗದ ಜನ ಇನ್ನೂ ಎತ್ತರಕ್ಕೆ ಬೆಳೆಯಬೇಕಿದೆ. ಸಂಕುಚಿತ ಕೀಳು ಮನೋಭಾವ, ಹೊಟ್ಟೆಕಿಚ್ಚು, ಅಲ್ಪ ಯಶಸ್ಸು ಸಿಕ್ಕಲ್ಲೂ ಜಂಭ, ನಾನು ಯಾರಿಗೇನು ಕಡಿಮೆ, ಅವರೇನು ಮಹಾ? ಎಂಬ ಅಹಂ. ನಾನೇಕೆ ಕೊಡಗು ಸಂಗಾತಿಯಂತ ಪತ್ರಿಕೆಯನ್ನು ಓದಬೇಕು? ಜನಾಂಗ ಬೆಳೆದರೆಷ್ಟು ಬಿಟ್ಟರೆಷ್ಟು ಈ ರೀತಿಯ ಮನೋಭಾವ ಬಿಟ್ಟು ನಮ್ಮ ಹೃದಯ ವೈಶಾಲತೆಯನ್ನು ಇನ್ನೂ ಹೆಚ್ಚಿಸಿಕೊಳ್ಳಬೇಕಾಗಿದೆ. ನಮ್ಮ ಜನಾಂಗದ ಜನ, ಪತ್ರಿಕೆ ಮುಂದುವರೆದರೆ ಅದರ ಸುಖವನ್ನು ಅನುಭವಿಸುವವರು ಖಂಡಿತ ನಾವೆ! ಜೀವನದ ಎಲ್ಲಾ ರಂಗಗಳಲ್ಲೂ ನಾವು ಅಭಿವೃದ್ಧಿ ಹೊಂದ ಬೇಕಾದದ್ದು ಸಾಕಷ್ಟಿದೆ. ಕೊಡಗು ಸಂಗಾತಿಯಂತಹ ಪತ್ರಿಕೆಗೆ ಎಲ್ಲರ ಸಹಕಾರ ಖಂಡಿತವಾಗಿಯೂ ಅತ್ಯಗತ್ಯ. ಎಲ್ಲರ ಪೂರ್ಣ ಸಹಕಾರ, ಆಶೀರ್ವಾದ ಪತ್ರಿಕೆಯ ಮೇಲೆ ಇರಲಿ ಅಂತ ಹಾರೈಸುತ್ತೇನೆ.

**ಡಾ|| ಪ್ರವೀಣ ಯನ್. ಎಸ್., ಕ್ಯಾಲಿಕಟ್, ಕೇರಳ.**

---

ಮಾನವ ಧಾರ್ಮಿಕ ಜೀವನದಲ್ಲಿ ಶಿಸ್ತಿನಿಂದಿದ್ದರೆ ಮರಣದ ಬಗ್ಗೆ ಚಿಂತಿಸಲಗತ್ಯವಿಲ್ಲ.

## *ಬಾಲ ಸಂಗಾತಿ ವಿಭಾಗ : ಜ್ಞಾನ -21*

### ಶಾಲೇಲಿ ಹೇಳಿಕೊಟ್ಟಿದ್ದೆಲ್ಲಾ ನಿಜ ಅಲ್ಲಾ

### ಭಾರತದ ಸಾಂಸ್ಕೃತಿಕ ಸಾಮ್ರಾಜ್ಯ-1

ಭಾರತೀಯ ಸಂಸ್ಕೃತಿ ಜಗತ್‌ನ ಕೆಲವೆ ಅತೀ ಪ್ರಾಚೀನ ಸಂಸ್ಕೃತಿಗಳ್ಲಿ ಒಂದು. ಭಾರತನ ಒಂದು ಕಡೆ ದುರ್ಗಮ ಆದ ಉನ್ನತ ಹಿಮಾಲಯ ಪರ್ವತಶ್ರೇಣಿ ಮತ್ತೆ ಉಳ್ದಕಡೆಗಳ್ಲಿ ಅಪಾರವೂ ದುಸ್ತರವೂ ಆದ ಸಾಗರಗ ಆವರಿಸ್ಯೊಳೊ. ಇವುಗಳಂದಾಗಿ ಭಾರತ ಉಳ್ದ ಪ್ರಪಂಚಂದ ಬೇರ್ಪಟ್ಟ್ ಶತ-ಶತಮಾನಗಳಷ್ಟ್ ದೀರ್ಘ ಕಾಲಲಿ, ಮತ, ದರ್ಶನ, ಕಲೆ, ಸಾಹಿತ್ಯ, ವೈದ್ಯಕ ಮೊದಲಾದ ವಿವಿಧ ರಂಗಗಳ್ಲಿ ತನ್ನದೆ ಆದ ಅಪೂರ್ವ ಸಂಸ್ಕೃತಿನ ನಿರ್ಮಿಸಿಕಂಡುಟ್ಟು. ಮನ್ಸ ಸ್ವಭಾವಂದ ಕುತೂಹಲ ಇರ್‍ವ ಸಾಹಸಿ. ಪರ್ವತಗ ಆಗಲಿ ಸಾಗರನ ಆಗಲಿ ಅವನ ಸಂಚಾರನ ಶಾಶ್ವತ ಆಗಿ ತಡೆಗಟ್ಟಿಕೆ ಆಕಿಲ್ಲೆ. ಬರೀ ಕುತೂಹಲಕ್ಕಾಗಿ ದೇಶ ಸುತ್ತುವ ಸಾಹಸಿಗ, ವ್ಯಾಪಾರಿಗ ಮತ ಪ್ರಸಾರಕರ್ ಮತ್ತೆ ದಂಡಯಾತ್ರೆ ಮಾಡುವ ವೀರ ಯೋಧಂಗ ತಮ್ಮ ತಮ್ಮ ನಾಡ್‌ಗಳ ಗಡಿಗಳ್ನ ದಾಟಿ ಜಗತ್‌ನ ಬೇರೆ ಭಾಗಗಳಿಗೆ ಹೋಗಿ ತಮ್ಮ ತಮ್ಮ ಕಾರ್ಯಗಳ್ನ ಸಾಧಿಸ್ಯೊಳೊ. ಇದ್ ಈಗ ಇದ್ದಂಗೆ ಸಂಚಾರ ಸೌಲಭ್ಯಗ ಮತ್ತೆ ಸಂಪರ್ಕ ಸಾಧನಗ ಇಲ್ಲದ ಕಾಲಲೂ ಗಣನೀಯ ಪ್ರಮಾಣಲಿ ನಡ್‌ದುಟು. ಈ ಪ್ರಕ್ರಿಯೆ ಎಂದ್‌ಂದ್ ಆರಂಭ ಆವುಟುತ ಊಹಿಸಿ ಹೇಳ್ದು ಕಷ್ಟ. ನಿರ್ದಿಷ್ಟ ಆಗಿ ಹಿಂಗೇ ನಡ್ದುಟುತ ಹೇಳಿಕೆ ಸಾಧ್ಯ ಇದ್ದಂತ ಐತಿಹಾಸಿಕ ದಾಖಲೆಗ ಕಾಲ ಪ್ರವಾಹಲಿ ನಷ್ಟ ಆವುಟು. ಬುದ್ಧ ಪೂರ್ವ ಕಾಲನ ವೈದಿಕ ಯುಗತ ಹೇಳ್ವ ಈಗನ ರೂಢಿ ಆ ಸಮಯಲೇ ಭಾರತೀಯ ಸಂಸ್ಕೃತಿ ತನ್ನ ಪಶ್ಚಿಮದ ಗಡಿಗಳ್ನ ದಾಟಿ ಅಫ್‌ಘಾನಿಸ್ಥಾನ (ಸಂಸ್ಕೃತ ಅಹಿಗಣಸ್ಥಾನ) ಇರಾನ್, ಅರೇಬಿಯಾ,ತುರ್ಕಿ ಗ್ರೀಸ್, ರೋಂ ಮತ್ತೆ ಯುರೋಪಿನ ವಿವಿಧ ಭಾಗಗಳಿಗೆ ಸಾಗಿ ಹೋಗಿತ್. ಆ ನಾಡ್‌ಗಳ ಪ್ರಾಚೀನ ಚರಿತ್ರೆಲಿ ಇದರ ಸ್ಪಷ್ಟ ಪ್ರಮಾಣಗ ಸಿಕ್ಕಿದೆ. ಉದಾ: ಕೆಲವು ವೈದಿಕ ದೇವತೆಗಳ ಮತ್ತೆ ಋಷಿಗಳ ಹೆಸ್ರ್‌ಗ ರೂಪಾಂತರ ಹೊಂದಿ ಗ್ರೀಕ್ ಪುರಾಣಗಳ್ಲಿ ಕೆಳಗಿನಂಗೆ ಕಂಡವೆ.

| ಸಂಸ್ಕೃತ | - | ಗ್ರೀಕ್ |
|---|---|---|
| ದ್ಯುಃ | - | ಜ್ಯೂಸ್ |
| ದ್ಯುಃಪಿತ್ನ್ | - | ಜೂಪಿಟರ್ |
| ಅಗ್ನಿ | - | ಎಗ್ನೆಸ್ |
| ಸೂರ್ಯ | - | ಹೋರಸ್ |
| ಶಬಲಾ | - | ಸರ್ಬರಸ್ |
| ಅಹ್ನಾ | - | ಅಥೆನಾ |
| ಪ್ರಮಂಥ | - | ಪ್ರೊಮೆತ್ಯುಸ್ |
| ಯವಿಷ್ಟ | - | ಹೆಫ ಸ್ಟೋಸ್ |
| ಇತ್ಯಾದಿಗ | | |

## *ಬಾಲ ಸಂಗಾತಿ ವಿಭಾಗ : ಕಥೆ -21*

### ಕಲ್ಸುದೊಂದು ಕಲೆ

- ಬಿಟ್ಟೀರ ಚೊಂದಮ್ಮ, ಶಂಭು

ವಿಧ್ಯೆ ಕಲ್ತವು ಎಲ್ಲವೂ ಅಧ್ಯಾಪಕರಾಕೆ ಸಾಧ್ಯ ಇಲ್ಲೆ. ಕಲಿಯಕೆ ಎಲ್ಲವೂ ಕಲಿಯಕ್ ಆದರೆ ಕಲ್ಸುದು ಒಂದು ಕಲೆ ಅದ್‌ಎಲ್ಲವುಕೆ ಗೊತ್ತಿರ್‍ದುಲೆ.

ಒಮ್ಮೆ ಒಬ್ಬರು ಪಂಡಿತರ್ ನೆರೆ ಊರಿಗೆ ಹೊರ್‍ಪಿದ್ದೊ. ಎರ್‍ಡ್ ಊರ್‌ಗಳ ಮಧ್ಯೆ ಒಂದು ದೊಡ್ಡ ಹೊಳೆ ಹರಿತಿತ್. ಹೊಳೆ ದಾಟಿಕೆ ದೋಣಿ ಸನ ಇತ್.ಪಂಡಿತರ್ ದೋಣಿಲಿ ಕುದ್ದ್‌ಕಂಡೊ ಇಬ್ಬರು ನಾವಿಕರ್ ದೋಣಿ ನಡ್ಸ್‌ತಿದ್ದೊ. ತುಂಬಾ ಅಗಲ ಇರುವ ಹೊಳೆ ಅದ್ದರಿಂದ ನಾವಿಕರ್ ಬೇಜಾರ್ ಕಳಿಯಕೆತ ಯಾವುದೊ ಹಳ್ಳಿ ಜಾನಪದ ಹಾಡ್‌ನ ಮೆಲ್ಲೆ ಹಾಡಿಕೆ ಶುರು ಮಾಡ್ದೊ. ಪಂಡಿತರ್ ತಮ್ಮ ಮೇದಾವಿತ್ವಕ್ಕೆ ತಕ್ಕಂತೆ ಪದ್ಯ ಗದ್ಯಗಳ ಬಗ್ಗೆ ಮಾತಾಡಿಕೆ ಶುರು ಮಾಡ್ದೊ. ಸ್ವಲ್ಪ ದೂರ ಹೋಕಾಕನ ನಾವಿಕರ ಹಾಡ್ ಮುಗ್ದದೆ.ನಿಮ್ಮ ಸಿರಿಕೆ ಆಗದೆ ಒಬ್ಬ ನಾವಿಕ ಪಂಡಿತರ ಕಡೆ ತಿರ್‍ಗಿನೋಡಿ, ಸಾಮಿ ನಾನ್ ತಿಳ್ವಳಿಕೆ ಇಲ್ಲದವ ನಿವೇನೋ ಗದ್ಯಪದ್ಯತ ಮಾತಾಡ್ತಾವಳರಿ ಪದ್ಯತೇಳ್ರೆ ಎಂತದ್ ಸ್ವಾಮಿತ ಕೇಳ್ತ್. ಒಬ್ಬ ಪಂಡಿತ ತಮ್ಮ ಮಾತುಕತೆಗೆ ಭಂಗ ಬಂದದ್ದಕ್ಕೆ ಸಿಡ್‌ಕಿಕಂಡ್ ನಮಿಗೇ ಬಗೆ ಹರ್‍ಸಿಕೆ ಆಗದೆ ಚರ್ಚೆ ಮಾಡ್ತಾ ಒಳೊ. ನಿಂಗೆ ಎಂತದ್ ಹೇಳ್ದು? ನಿನ್ನ ಕೆಲ್ಸ ನೀನ್ ನೋಡ್‌ತ್ತೇಳ್ತ್. ಆ ನಾವಿಕ ಪೆಚ್ಚಾತ್. ಆಗ ಎರಡನೇ ಪಂಡಿತ ಹೇಳ್ತ್. ಯಾಕೆ ಸಾಧ್ಯ ಇಲ್ಲೆ ನೋಡಿ ಈಗ ನೀವು ಹಳ್ಳಿ ಭಾಷೆಲಿ ಏನೋ ಹಾಡ್‌ತಿದ್ದರಿ ಅಲಾ, ಅದೇ ಪದ್ಯತ್ತೇಳ್ತ್. ನಾವಿಕಂಗೆ ಖುಷಿ ಆತ್.

ಈಗ ನಾವಿಕರ್ ಇಬ್ಬರು ಯಾವುದೋ ವಿಷಯಲಿ ಮಾತಾಡಿಕೆ ಶುರು ಮಾಡ್ದೊ. ಅವರ ಮಾತ್ ಮುಗ್ದರೂ ಹೊಳೆ ದಾಟಿಕೆ ಇನ್ನೂ ದೂರ ಇತ್. ಆಗ ಇನ್ನೊಬ್ಬ ನಾವಿಕ ಕೇಳ್ತ್. ಸ್ವಾಮಿ ನೀವು ಬೇಜಾರ್ ಮಾಡಿಕಣದಿದ್ದರೆ ನನ್ನದೂ ಒಂದು ಪ್ರಶ್ನೆ. ನಂಗೂ ತಿಳ್ಕಣಿಕೆ ಆಶೆ,ದಯವಿಟ್ಟು ಗದ್ಯತ್ತೇಳ್ರೆ ಎಂತದ್‌ತ ನನ್ನಂತ ಪೆದ್ದಂಗೂ ಅರ್ಥ ಆಗುವಂಗೆ ಹೇಳಿ ಸ್ವಾಮಿತ ಕೇಳ್ತ್. ಮೊದಲನೆ ಪಂಡಿತಂಗೆ ತುಂಬಾ ಸಿಟ್ಟ್ ಬಂದ್, ಎಂಥೆಂತ ಪಂಡಿತರ್‌ಗೆ ಬಗೆ ಹರಿಸಿಕೆ ಸಾಧ್ಯ ಆಗದ ವಿಷಯನ ನಿಂಗೆಂತ ಹೇಳ್ದು, ನಿನ್ನ ತಲೆ, ಅಧಿಕ ಪ್ರಸಂಗಿತ ಬೈತ್. ಆಗ ಎರಡನೆ ಪಂಡಿತ್ ಯಾಕೆ ಆದುಲೆ. ನೀವು ಈಗ ಮಾತಾಡ್ತಾ ಇದ್ದರಿ ಅಲಾ ಅದೇ ಗದ್ಯತ್ತೇಳ್ತ್. ನಾವಿಕರಿಬ್ಬರಿಗೆ ಬಾಳ ಸಂತೋಷ ಆತ್. ದೋಣಿನೂ ದಡ್ಕೆ ಬಾತ್. ನಾವಿಕರ್ ಪಂಡಿತರಿಗೆ ಕೈ ಮುಗ್ದ್ ಕಳ್ಸಿದೊ.

ಮುಂದುವರ್‍ದದೆ.

# ಮಕ್ಕಳಿಗಾಗಿ ಮಹಾ ಭಾರತ

ಬರ್‌ದವು -ಪೂಜಾರಿರ ಮೊಂಣಪ್ಪ

ಕರ್ಣ:ಪಾಂಡವು ಮತ್ತೆ ಕೌರವುಬಿಲ್ಲ್ ಬಾಣದ ವಿದ್ಯೆ ಕೃಪಾಚಾರ್ಯ ಹಂಗೆ ದ್ರೋಣಾಚಾರ್ಯಂದ ಕಲ್‌ತೊ. ಒಂದ್ ದಿನ ಈ ಪಾಂಡು ಮತ್ತೆ ಕೌರವ ರಾಜ ಕುಮಾರರ್ ಕಲ್ತ ಬಿಲ್ಲ್ ಬಾಣ ವಿದ್ಯೆ ಪರೀಕ್ಷೆ ಮಾಡಿಕ್ಕಾಗಿ ಗೊತ್ತ್ ಮಾಡಿ ಹಸ್ತಿನಾಪುರದ ರಾಜಗಳಿಗೂ ಸುತ್ತಮುತ್ತದ ರಾಜಗಳಿಗೂ ಮತ್ತೆ ಅವರ ರಾಜ ಕುಮಾರಗಳಿಗೂ ತಿಳಿಸಿದೊ. ಹಂಗಾಗಿ ಒಳ್ಳಾ ತುಂಬಾ ಜನ ಸೇರಿ ಬಾಳಾ ಕುರುಪಿಂದ ಇದ್ದೊ. ಆಗ ಅರ್ಜುನ ತನ್ನ ಬಿಲ್ಲ್ ವಿದ್ಯೆ ಚಮತ್ಕಾರನ ತೋರ್ಸಿತ್. ಇದರ್ನ ಧುರ್ಯೋಧನ ನೋಡಿ ಅವನ ಮೊಕ ಕಪ್ಪಾತ್. ಆ ದಿನದ ಕಡೇಲಿ ಒಂದು ಮೂಲೆಂದ ಒಬ್ಬ ದೊಡ್ಡ ಬೊಬ್ಬೆ ಹಾಕಂಡ್ ಗುಡುಗಿದಂಗೆ ಬಾತ್. ಹಂಗೆ ಬಂದ್ ಬಿಲ್ಲ್ ವಿದ್ಯೆಲಿ ನಿಪುಣನಾದವನ ಎದುರಿಸುವಂಗೆ ಬಾತ್. ಗುಂಪಾಗಿ ಸೇರಿದ್ದ ಜನರ ಮಧ್ಯೆಂದ ಒಬ್ಬ ಹೂಂಕರಿಸಿಕಂಡ್ ಬಾತ್. ಎಲ್ಲಾ ಕಡೆ ನಿಶಬ್ಧ ವಾತಾವರಣ ಆಗಿರ್‌ಕನ ದ್ರೋಣನ ಹತ್ರ ಬಂದ್ ಅವನ ಸುತ್ತಲೂ ಜಂಬಂದ ನೋಡಿಕಂಡ್ ಸಸಾರಲಿ ದ್ರೋಣಂಗೆ ಮತ್ತೆ ಕೃಪಂಗೆ ನಮಸ್ಕಾರ ಮಾಡಿ ಅರ್ಜುನ ಇದ್ದಲ್ಲಿಗೆ ಹೋಗಿ ನಿಂತತ್. ಇವಿಬ್ಬರು ಒಬ್ಬಳೇ ಅವ್ವನ ಹೊಟ್ಟೆಲಿ ಹುಟ್ಟಿರೂ ಅವುಕೆ ಅವಿಬ್ಬರ್ ಅಂಣ ತಂಮತ್ತೇಳಿ ಗೊತ್ತಿತ್ತ್‌ಲೆ. ಅವನೆ ಕರ್ಣ.

ಕರ್ಣ ಅರ್ಜುನಂಗೆ ಸಿಡ್‌ಲ್ ಬಡ್‌ದ ರೀತಿಲಿ ಜೋರಾಗಿ ಹೇಳ್ತ್. ಅರ್ಜುನ ಬಿಲ್ ಬಾಣ ಬುಡ್‌ದಕ್ಕಿಂತ ಲಾಯಕಲಿ ಬುಟ್ಟನೆಂತ್ತೇಳಿ ಅರ್ಜುನಗಿಂತ ಎರಡರಸ್ಟ್ ಬಿಲ್ ಬಾಣದ ಚಳಕ್‌ನ ತೋರಿಸಿತ್. ಇದರ್ನ ಧುರ್ಯೋಧನ ನೋಡಿ ಕರ್ಣನ ಎರಡ್ ಕೈಗಳಿಂದ ತಬ್ಬಿಕಂಡತ್. ಕರ್ಣ ಹೇಳ್ತ್. ರಾಜನೇ ನಂಗೆ ಎರ್ಡ್ ವಿಷಯಲಿ ಅನು ಮಾಡಿಕೊಡು. ಒಂದನೆಯದ್ ನಿನ್ನ ಪ್ರೀತಿ. ಎರಡನೆಯದ್ ಅರ್ಜುನನೊಟ್ಟಿಗೆ ಒಂದ್ ಒಂದ್ ಸರ್ತಿ ಕಾದಾಡುವ ಅವಕಾಶ ಕಲ್ಪಿಸಿಕೊಡು. ನನ್ನ ಉದ್ಧಾರ ನಿನ್ನ ಉದ್ಧಾರ ಕೈಲು ಉಟ್ಟು. ಇದೇ ನನ್ನ ಜೀವನದ ಕುಷಿಗೆ ಕಾರಣ ಆಗಿದ್ದದೆ. ಹಿಂಗೆ ಹೇಳ್‌ಕಾಕನ ದುರ್ಯೋಧನನಂಗೆ ಎದೆಲಿ ಪ್ರೀತಿ ಉಕ್ಕಿ ಹರ್ತ್. ಹಂಗೇ ಅರ್ಜುನಂಗೆ ಸಿಟ್ಟಿಂದ ಅವನ ಮೊರೆ ಬೆಂಕಿಂದ ಉರಿವಂಗೆ ಆತ್. ಬೆಟ್ಟದ ಶಿಖರಂಗೆ ನಿಂತಿದ್ದ ಕರ್ಣನ ಹತ್ರ ಹೋಗಿ ಹಿಂಗೆ ಹೇಳ್ತ್. "ಓ ಕರ್ಣ ನಿನ್ನನ್ನ ಕರ್‌ಸದೆ ಸುಮ್ಮನೆ ಹರಣೆ ಕೊಟ್ಟ್‌ಬ್ಯಾಡ. ನಿನ್ನನ್ನ ನರಕಕ್ಕೆ ಕಳ್ಸಿನೆ. ಇದ್ನ ಕೇಳ್ದ ಕರ್ಣ ಅಟ್ಟಹಾಸಂದ ನೆಗಾಡ್ತ್.

ಈ ಆಟದ ಬಾಣೆ ನಿನ್ನ ಸ್ವಂತದಲ್ಲ. ಇದರ್ಲಿ ಎಲ್ಲವುಕ್ಕೂ ಹಕ್ಕುಟ್ಟು. ಪಾಂಡವರ ಸಾರ್ವಭೋಮತ್ವದ ಕೂಸುವಂಗೆ ಬರೇ ಮಾತಿಂದ ಪ್ರಯೋಜನ ಏನ್? ಮಾತ್‌ನಬದಲ್ ಬಾಣ ಬುಡುತ ಕರ್ಣ ಹೇಳ್ತ್. ಅರ್ಜುನ ಗುರು ದ್ರೋಣನ ಅಪ್ಪಣೆ ಪಡ್ದ್ ಅಂಣ ತಮ್ಮಂದಿರ್ ತಬ್ಬಿಕಂಡ್ ಬಾಣ ಬುಡಿಕೆ ತಯಾರಾಗಿ ನಿತ್ತತ್. ಕರ್ಣನು ಸಹ ಕೌರವರ ಅಂಣ ತಾಯಂದಿರ ಕೇಳಿ ಬಾಣೆಗೆ ಬಂದ್ ನಿತ್ತತ್. ಈ ಸಮಯಲಿ ಇಂದ್ರ ಮತ್ತೆ ಬಾಸ್ಕರ ಅವರವರ ಮಕ್ಕಳಿಗೆ ಧೈರ್ಯ ಹೇಳಿಕೆ ಪ್ರತ್ಯಕ್ಷರಾಗಿ ಬಂದೊ.

ಕುಂತಿ ಕರ್ಣನ ಕಂಡ್ ಸೊಯ ತಪ್ಪಿ ಬಿದ್ದೋತ್. ವಿದುರ ಇದರ್ನ ನೋಡಿ ಅಲ್ಲಿದ್ದ ಕೆಲ್ಸದ ಹೆಂಗ್‌ಸ್‌ನ ಕರ್ದ್ ಹೇಳ್ತ್. ಅವುಳು ಕುಂತಿಗೆ ಆರೈಕೆ ಮಾಡ್ದ ಮ್ಯಾಲೆ ಸರಿ ಆತ್. ಆದರೂ ಕುಂತಿ ಈ ರೀತಿ ಅರ್ಜುನ ಮತ್ತೆ ಕರ್ಣ ಕಾದಾಟಕ್ಕೆ ಶುರು ಮಾಡಿಕೆ ಇರ್‌ಕಾಕನ ಅಲ್ಲಿಗೆ ಕೃಪಾ ಚಾರ್ಯಬಾತ್. ಅವುಕೆ ಒಂಟಿಯಾಗಿ ಕಾಳಗ ಮಾಡುವ ವಿಷಯದ ಎಲ್ಲಾ ತರ್ಕಗ ತಿಳಿದವು. ಆದ್ದರಿಂದ ಅವರಿಬ್ಬರ ಮಧ್ಯೆ ನಿತ್ತತ್. ನಿಂತ್ ಅರ್ಜುನ ಕುಂತಿ ಮತ್ತೆ ಪಾಂಡುನ ಮಂಙ್ಙ ರಾಜ ಕುಮಾರ. ನೀನ್ ಯಾರ ರಾಜಕುಮಾರತ ಕೇಳ್ದ್. ಕರ್ಣ ಸಾಂಕಿದ ಅಪ್ಪ ಅವ್ವನ ಹೆಸ್ರ್ ಹೇಳ್ದ್. ಆಗ ಕೃಪಾಚಾರ್ಯ ಹೇಳ್ತ್. ನಿಮ್ಮ ಜಾತಿಯವನೊಟ್ಟಿಗೆ ಯುದ್ಧ ಮಾಡುವ ಕ್ರಮ ಇಲ್ಲೆ. ನೀನ್ ನಿನ್ನ ಹುಟ್ಟುನ ವಿಷಯಲಿ ಸಂಶಯ ಇರೊದರಿಂದ ನೀನ್ ಯಾರ್‌ತ ಹೇಳಕ್ಕು. ನೀನ್ ಸಾವಿಗ್ಯಾರಿಗೂ ಗೊತ್ತಿಲ್ಲದೆ ಇರುವ ಹೊಸಬ. ಕರ್ಣ ಈ ಮಾತ್‌ನ ಕೇಳಿ ಮಳೆ ಬಾಕಾಕನ ಮಳೆ ನೀರಂಗೆ ಬಗ್ಗಿ ಹೋಗುವಂಗೆ ಕರ್ಣ ಮೊಖ ತಗ್ಗಿಸಿತ್.

ಈ ಸಮಯಲಿ ದುರ್ಯೋಧನ ಕುದ್ದಲ್ಲಿಂದ ಎದ್ದ್ ಬಂದ್ ನಾನ್ ಕರ್ಣಂಗೆ ಅಂಗ ರಾಜ್ಯದ ರಾಜನಾಗಿ ಮಾಡ್ನೆಂತ್ತೇಳಿ ಕರ್ಣಂಗೆ ಕಿರೀಟನ ಇಟ್ಟ್ ಕ್ಷತ್ರಿಯ ರಾಜನಾಗಿ ಮಾಡ್ತ್. ಈ ಸಂದರ್ಭಲಿ ಕರ್ಣನ ಸಾಕಿದ ಅಪ್ಪ ಅವ್ವಂದರ್ ಬಂದ್ ಕರ್ಣನ ನೋಡಿ ಬಹಳ ಕುಷಿ ಆಗಿ ಕರ್ಣನ ತಬ್ಬಿಕಂಡೊ. ಈ ಸಮಯಲಿ ಅಲ್ಲಿದ್ದ ದುರ್ಯೋಧನ, ಧೃತರಾಷ್ಟ್ರನ ಮತ್ತೆ ಭೀಷ್ಮರ ಅಪ್ಪಣೆ ಸಹ ಪಡ್‌ದಿತ್. ಕರ್ಣ ಇದಕ್ಕಾಗಿ ಬಹಳ ಮರ್ಯಾದೆಗಳಿಂದ ದುರ್ಯೋಧನನಂಗೆ ತಲೆ ಬಾಗಿಸಿತ್. ಅಜ್ಜ ಕರ್ಣನ ಸಾಂಕಿದ ಅಪ್ಪ ಕರ್ಣನ ಮಂಙ್ಙತ ಕರ್‌ದ್ ಕುಷಿಲಿ ಕಣ್ಣೀರ್ ಸುರ್‌ಸಿತ್. ಇದರ್ನ ಭೀಮ ನೋಡಿ ಜೋರಾಗಿ ನೆಗಾಡ್ತ್. ಇಂವ ಒಬ್ಬ ಕುದುರೆಗಾಡಿ ಹೊಡೆಂವನ ಮಙ್ಙ. ನೀನ್ ಅರ್ಜುನನ ಕೈಲಿ ಸಾಯಕ್ಕೆ ಯೋಗ್ಯತೆ ಇಲ್ಲೆ. ಹಂಗೂ ಅಂಗ ರಾಜ್ಯದ ರಾಜನಾಗಿರಿಕ್ಕೂ ನಾಲಾಯಕ್ಕ್‌ತ್ತೇಳ್ತ್. ಇದರ್ನ ಕೇಳ್ಸಿಕಂಡ್ ಸಿಟ್ಟಿಂದ ಅಂವನ ತುಟಿ ಅದ್‌ರಿ ಮ್ಯಾಲೆ ನೋಡ್ತ್. ಆಗ ಅಲ್ಲಿಗೆ ಧುರ್ಯೋಧನ ಬಂದದ್ದರಿಂದ ಆ ಮುಖ ಭಂಗದ ದುಃಖ ಕಮ್ಮಿ ಆತ್. ದುರ್ಯೋಧನ ಹೇಳ್ತ್. ಓ ವೃಕೋಧರ ಹಿಂಗೆ ನೀನ್ ಮಾತಾಡ್ದು ನಿನ್ನ ಭೀಮನ ಯೋಗ್ಯತೆಗೆ ಸರಿ ಕಾಂಬಲೆ. ಪರಾಕ್ರಮ ಕ್ಷತ್ರಿಯರ ಶ್ರೇಷ್ಠ ಗುರ್ತು, ದೊಡ್ಡ ದೊಡ್ಡ ವೀರರ ಮತ್ತೆ ಹೊಳೆ ಮುಲನ ಕೇಳ್‌ಕಾಗದ್. ಪ್ರಪಂಚಲಿ ದೊಡ್ಡ ಜನ ದೀನರಾಗಿ ಏನ್ ಇಲ್ಲದೆ ಹುಟ್ಟಿದ ಎಷ್ಟೋ ಉದಾಹರಣೆಗೆ ಒಳೊ. ನಿನ್ನ ಮುಲದ ವಿಷಯಲೂ ಹಾಳಾದ ಪ್ರಶ್ನೆಗಳ್ನ ಕೇಳಕ್ಕ್‌ತ ಹೇಳ್ದ್.

ಈ ವೀರನ ನೋಡಿ ಅಂವನ ದೇವ ಸ್ವರೂಪ ಅಂವನ ಕಿಮಿದ್ ಕೊಂಡಳ, ಅಂವನ ಕವಚ ಅಂವನ ಬಿಲ್ಲ್ ವಿದ್ಯೆ ಚಾತುರ್ಯ ಎಲ್ಲಾ ಅಂವನ ಹುಟ್ಟುನ ಗುಟ್ಟು ಎಲ್ಲಾ ಬಲ್ಲಾದಿ ಆಗಿಟ್ಟು. ನೀನ್‌ಅಂವನ ಅಂಗರಾಜನ ಆಳಿಕೆ ನಾಲಾಯಿಕ್ಕ್‌ತ್ತೇಳಿಯ, ಅಂವ ಇಡೀ ಲೋಕನ ಆಳ್ವ ಶಕ್ತಿ ಉಟ್ಟುತ ದುರ್ಯೋಧನ ಕರ್ಣನ ರಥಲಿ ಕೂರ್ಸಿ ಕಂಡ್ ಹೋತ್. ರಾತ್ರೆ ಆಗಿತ್ತ್. ಬುಡ್ಡಿ ದೀಪದ ಬೆಳ್‌ಕ್‌ಲಿ ಕೆಲ್ವು ಜನ ಅರ್ಜುನನ, ಕೆಲ್ವು ಜನ ಕರ್ಣನ, ಇನ್ನ್ ಕೆಲ್ವು ಜನ ದುರ್ಯೋಧನ ವಿಷಯ ಮಾತಾಡ್‌ತಿದ್ದೊ.

ಇದರನ್ನೆಲ್ಲಾ ನೋಡಿಕಂಡ್ ಇದ್ದ ಇಂದ್ರ, ಅರ್ಜುನ ಮತ್ತೆ ಕರ್ಣ ಇವುಕ್ಕೆ ಬಾಳ ಜೋರಾದ ಕಾದಾಟ ಆಗುವ ಸಂಭವ ಉಟ್ಟುತ್ತೇಳಿ ಹಾರಂವನ ಅವತಾರ ತಾಳಿ ದಾನಶೂರತ ಹೆಸ್‌ರ್ ತಂದ ಕರ್ಣನ ಹತ್ರ ಕರ್ಣನ ಕಿವಿ ಕೊಂಡಳ ಮತ್ತೆ ಕವಚನ ದಾನ ಆಗಿ ಕೇಳ್ತ್. ಸೂರ್ಯ ದೇವ್ರು ಈ ವಿಷಯನ ಕರ್ಣನ ಕನ್‌ಸ್‌ಲಿ ಬಂದ್ ಇಂದ್ರ ಹಿಂಗೆ ಬಾದುತ್ತೇಳಿ ಎಚ್ಚರಿಕೆ ಕೊಟ್ಟಿತ್. ಆದ್ರೂ ಹಾರಂವ ಬಂದ್ ದಾನ ಕೇಳ್‌ಕಾಕನ ದಾನ ಕೊಡ್ದುಲೆತ ಹೇಳಿಕೆ ಆತ್‌ಲ್ಲೆ. ಆ ಹಾರಂವ ಈ ರೀತಿ ದಾನನ ತಕ್ಕಂಡ್ ಕರ್ಣಂಗೆ ಅನಾರ್‌ವರ ಕೇಳ್‌ತ ಹೇಳ್ದ್. ಕರ್ಣಂಗೆ ಆ ಹಾರಂವ ಇಂದ್ರತ ಗೊತ್ತಾಗಿ ಇಂದ್ರ ಆಯುಧ (ಶಕ್ತಿ) ಇಂದ್ರಾಯುಧ ಬೇಕುಂತ್ತೇಳಿ ಕೇಳ್ತ್. ಇಂದ್ರ ಈ ಆಯುಧನ ಕರ್ಣಂಗೆ ಕೊಡ್‌ಕಾಕನ ಒಂದ್ ಸರ್ತ್ ಹಾಕಿತ್. ಈ ಆಯುಧಂದ ಒಬ್ಬನ ಕೊಲ್ಲಿಕೆ ಮಾತ್ರ ಉಪಯೋಗಿಸಕು, ಹಂಗೆ ಉಪಯೋಗಿಸಿದ ಮ್ಯಾಲೆ ಅದ್ ನನ್ನ ಹತ್ರ ಹಿಂದಕ್ಕೆಬಂದದೆತ ಹೇಳಿ ಇಂದ್ರನ ಆಯುಧನ ಕರ್ಣಂಗೆ ಕೊಟ್ಟಿತ್.

ಇದಾದ ಮ್ಯಾಲೆ ಕರ್ಣ ಪರಷುರಾಮನ ಹತ್ರ ತಾನ್ ಬ್ರಾಹ್ಮಣತ ಒಂದ್ ಸಂಣ ಸುಳ್ಳ್ ಹೇಳಿ ಪರಶುರಾಮನ ಶಿಷ್ಯ ಆಗಿ ಎಲ್ಲಾ ತರದ ಬಿಲ್ಲ್ ವಿದ್ಯೆಗಳ್ನ ಕಲ್ತತ್. ಒಂದ್ ದಿನ ಪರಶುರಾಮ ತನ್ನ ಶಿಷ್ಯನ ತೊಡೆಮ್ಯಾಲೆ ತಲೆ ಮಡ್‌ಗಿ ನಿದ್ದೆ ಮಾಡ್‌ತಿತ್ತ್. ಆಗ ಒಂದು ದುಂಬಿ ಹುಳ ಕರ್ಣನ ತೊಡೆನ ಕೊರ್ದ್ ತುಂಬಾ ರಕ್ತ ಬರ್‌ತಿತ್ತ್. ರಕ್ತ ಬಂದರೂ ಸಹ ಕರ್ಣ ಗುರುನ ನಿದೆ ಕೆಡ್ಸಿಕಾಗದ್‌ತ್ತೇಳಿ ಹಠಲಿ ತೊಡೆನ ಅಲ್ಲಾಡಿಸದೆ ಗಟ್ಟಿಯಾಗಿ ಕುದ್ದಿತ್. ಪರಸುರಾಮಂಗೆ ನಿದ್ದೆ ಬುಟ್ಟ್ ಎಚ್ಚರಾಕನ ಕರ್ಣನ ತೊಡೆಂದ ರಕ್ತ ಹೋದರ ನೋಡಿ ವಿಚಾರಿಸ್‌ಕಾಕನ ಕರ್ಣ ನಡ್ದದರ್‌ನ ಹೇಳ್ತ್. ಆಗ ಪರಸುರಾಮ ಕರ್ಣನ ಕೇಳ್ತ್. ನೀನ್ ಹಾರಂವ ಅಲ್ಲಾ ನೀನ್ ಕ್ಷತ್ರಿಯನೆ ಆಗಿರೋಕು. ಹಂಗಾಗಿ ದುಂಬಿ ನಿನ್ನ ತೊಡೆನ ಬೈರಂಗಿ ಕೊರ್ದಂಗೆ ಕೊರೆಯಕನ ನೀನ್ ಸುಮ್ಮನೆ ಇದ್ದ. ಸಂಶಯ ಬಂದ್ ನೀನ್ ನಂಗೆ ಮೋಸ ಮಾಡ್‌ದರಂದ ನೀನ್ ಕಲ್ತ ವಿದ್ಯೆ ನಿಂಗೆ ಬೇಕಾಕನ ಮರ್‌ತೇ ಹೋಗಲಿತ ಶಾಪ ಹಾಕಿತ್. ಹಂಗಾಗಿ ಅರ್ಜುನನೊಟ್ಟಿಗೆ ಕಾದಾಡ್‌ಕನ ಇಂದ್ರ ಕೊಟ್ಟ ಬ್ರಹ್ಮಸ್ತ್ರದ ಮಂತ್ರ ಗ್ಯಾನನೇಬಾತಿಲ್ಲೆ.

ಕರ್ಣ ಮಹಾಭಾರತದ ಯುದ್ದಲಿ ಅರ್ಜುನನ ವಿರುದ್ಧ ಯುದ್ಧ ಮಾಡ್‌ಕಾಕನ ಕರ್ಣನ ರಥ ಮಂಣ್‌ಲಿ ಹೂಣಿ ಹೋಗಿ ಅವನ ಚಕ್ರನ ನಡ್‌ಸಿಕೆ ಆಗದಿರ್‌ಕನ ಅಂವನ, ಅರ್ಜುನ ಬಾಣ ಬುಟ್ಟ್ ಕೊಂದ್ ಹಾಕಿದೆ. ಕುಂತಿಗೆ ತನ್ನ ಮಂಙ್ಙ ಕರ್ಣನ ಸಾದ್ ಕೇಳಿ ಬಾಳ ಬಾಳ ದುಃಖ ಆತ್.

-ಮುಂದ್‌ವರ್ದದೆ.

ಮಾನವನೋರ್ವನ ನೈತಿಕತೆ ಹೋದ ನಂತರ ಅವನ ಬಳಿ ಧರ್ಮ ಉಳಿದಿರಲಾರದು.

# ಆಯುರ್ವೇದ ಕ್ಷೇತ್ರದ ವೈದ್ಯೆ ಡಾ|| ಎ. ಪಿ. ಭಾರತಿ, ಬಿ. ಎ. ಎಂ.ಎಸ್. ಎಂ. ಡಿ.,



ಸಾವಿರಾರು ವರ್ಷಗಳಿಂದ ಮಾನವನ ಆರೋಗ್ಯ ಕಾಪಾಡಿಕೊಂಡು ಬರಲು ಆಯುರ್ವೇದ ಔಷಧಿಯು ಸಹಕರಿಸಿಕೊಂಡು ಬಂದಿದೆ. ಬ್ರಿಟೀಷರು ಭಾರತಕ್ಕೆ ಕಾಲಿಡುವ ಮೊದಲು ನಮ್ಮ ದೇಶದಲ್ಲಿ ಆಯುರ್ವೇದ ಮತ್ತು ಯುನಾನಿ ಪದ್ಧತಿಗಳು ಹೆಚ್ಚು ರೂಢಿಯಲ್ಲಿದ್ದವು. ಅನಂತರ ಅಲೋಪೆಥಿ ಹೆಚ್ಚು ಹೆಚ್ಚು ಜನರ ಗಮನ ಸೆಳೆಯಿತು. ಆದರೇ ಇತ್ತೀಚಿನ ವರ್ಷಗಳಲ್ಲಿ ಪುನಃ ಆಯುರ್ವೇದವು ಜನ ಮೆಚ್ಚಿಗೆ ಪಡೆಯುತ್ತಿದೆ. ಇದಕ್ಕೆ ಮುಖ್ಯ ಕಾರಣ. ಇದರ ಸೇವನೆಯಿಂದ ಯಾವುದೇ ದುಷ್ಪರಿಣಾಮಗಳು (Side Effect) ಬರುವುದಿಲ್ಲ.

ಆಯುರ್ವೇದದ ಬಗ್ಗೆ ಸುಮಾರು 9 ವರ್ಷಗಳವರೆಗೆ ಅಭ್ಯಾಸಮಾಡಿ, ಪ್ರಸ್ತುತ ಮಡಿಕೇರಿಯಲ್ಲಿ ಸ್ವಂತ ಚಿಕಿತ್ಸಾಲಯವನ್ನು ಇಟ್ಟುಕೊಂಡು ರೋಗಿಗಳ ಸೇವೆ ಮಾಡುತ್ತಿರುವ ಡಾ. ಎ. ಪಿ. ಭಾರತಿ, ಇವರಿಂದ ಆಯುರ್ವೇದದ ಬಗ್ಗೆ ಮತ್ತು ಇವರ ಕಿರು ಪರಿಚಯ.

ಡಾ. ಎ. ಪಿ. ಭಾರತಿಯವರು ಮಡಿಕೇರಿ ತಾಲ್ಲೂಕು ಹೊಸ್ಕೇರಿ ಗ್ರಾಮದ ನಿವಾಸಿಗಳಾದ ನಿವೃತ್ತ ಶಿಕ್ಷಕ ದಂಪತಿ ಶ್ರೀ ಅಯ್ಯಂಡ್ರ ಬಿ. ಪೂಣಚ್ಚ ಮತ್ತು ಶ್ರೀಮತಿ ಪಾರ್ವತಿಯವರ ಪುತ್ರಿ. ಈ ದಂಪತಿಗಳ ಮೂವರು ಮಕ್ಕಳಲ್ಲಿ ಒಬ್ಬ ಅಕ್ಕ ಡಾ. ಎ. ಪಿ. ಸೋನಿರಾಣಿ, ದಂತ ವೈದ್ಯರು. ಮತ್ತು ಒಬ್ಬ ತಮ್ಮ ಎ. ಪಿ. ರಾಜೇಶ್ ಎಂ. ಸಿ. ಎ. ತಾಂತ್ರಿಕ ಪದವೀಧರ ವನ್ನು ಪಡೆದಿರುವರು. 17-6-1973 ರಲ್ಲಿ ಜನಿಸಿದ ಡಾ. ಭಾರತಿಯವರ ಪ್ರಾಥಮಿಕ ಶಿಕ್ಷಣ ಸರಕಾರಿ ಹಿರಿಯ ಪ್ರಾಥಮಿಕ ಶಾಲೆ, ಮರಗೋಡು, ಪ್ರೌಢಶಾಲಾ ಶಿಕ್ಷಣ, ಭಾರತಿ ಪ್ರೌಢ ಶಾಲೆ ಮರ ಗೋಡು, ಇಲ್ಲಿ ಮುಗಿಸಿ ಉಡುಪಿಯ ಯಂ. ಜಿ. ಯಂ ಕಾಲೇಜಿನಲ್ಲಿ ಪ್ರಥಮ ಹಾಗೂ ದ್ವಿತೀಯ ಪಿ. ಯು. ಸಿ. ಯನ್ನು ಉನ್ನತ ಶ್ರೇಣಿಯಲ್ಲಿ ಮುಗಿಸಿದರು. ಅನಂತರ ಆಯುರ್ವೇದ ಕಾಲೇಜಿಗೆ ಸೇರ್ಪಡೆ. ಐದುವರೆ ವರ್ಷದ ವ್ಯಾಸಂಗದ ನಂತರ ಮೈಸೂರು ವಿಶ್ವ ವಿದ್ಯಾನಿಲಯದ ಅಂತಿಮ ಪರೀಕ್ಷೆಯಲ್ಲಿ ದ್ವಿತೀಯ ರ್‍ಯಾಂಕಿನ ವಿಜೇತೆ. ಮುಂದೆ ಆಯುರ್ವೇದದಲ್ಲಿ ಸ್ನಾತಕೋತ್ತರ ಪದವಿಗಾಗಿ ಸರಕಾರಿ ಆಯುರ್ವೇದದಲ್ಲಿ ಸ್ನಾತಕೋತ್ತಪರ ಪದವಿಗಾಗಿ ಸರಕಾರಿ ಆಯುರ್ವೇದ ಕಾಲೇಜಿನಲ್ಲಿ ಮೂರು ವರ್ಷದ ವ್ಯಾಸಂಗ ಮುಗಿಸಿ ಸ್ನಾತಕೋತ್ತರ ಪದವಿ ಪ್ರಾಪ್ತಿ.

ಡಭಾರತಿಯವರನ್ನು ಕೊಡಗು ಸಂಗಾತಿ ಪರವಾಗಿ ಲೇಖಕರು ಮಾತನಾಡಿಸಿದಾಗ

ಕೊ. ಸಂ. : ಆಯುರ್ವೇದ ಕ್ಷೇತ್ರದ ಆಯ್ಕೆಗೆ ಕಾರಣವೇನು?

ಡಾ. ಭಾರತಿ: ಭಾರತೀಯ ಸಂಸ್ಕೃತಿಯ ಬಗ್ಗೆ ಹೆಚ್ಚಿನ ಒಲವು, ಹಾಗೂ ಭಾರತೀಯ ವೈದ್ಯ ಪದ್ಧತಿಯ ಬಗ್ಗೆಹೆಚ್ಚಿನ ಆಸಕ್ತಿ

ಕೊ. ಸಂ. : ಅಲೋಪತಿ ಮತ್ತು ಆಯುರ್ವೇದ ಔಷಧಿಗಳಲ್ಲಿ ನೀವು ಕಂಡ ವ್ಯತ್ಯಾಸವೇನು?

ಡಾ. ಭಾ.: ಎರಡು ಪದ್ಧತಿಗಳಲ್ಲಿ ಚಿಕಿತ್ಸಾ ವಿಧಾನ ಹಾಗೂ ಸಿದ್ಧಾಂತಗಳು ಬೇರೆ. ಆದರೇ ಎರಡರ ಗುರಿ ಒಂದೇ. ಆಯುರ್ವೆದ ಔಷಧಿಯನ್ನು ಗಿಡ ಮೂಲಿಕೆ ಇತ್ಯಾದಿಗಳಿಂದ ಅದರ ಮೂಲ ಗುಣವನ್ನು ಬದಲಿಸದೆ ಉಪಯೋಗಿಸಬಹುದು. ಆದರೇ ಅಲೋಪತಿ ಔಷಧಿಗಳಲ್ಲಿ ಅದರ ಮೂಲ ಗುಣವನ್ನು ಬದಲಿಸಿ ಕೆಲವು ರಾಸಾಯನಿಕ ವಸ್ತುಗಳನ್ನು ಸೇರಿಸಿ ಬಳಸಲಾಗುತ್ತದೆ.

ಕೊ. ಸಂ.: ಆಯುರ್ವೇದ ಪದ್ಧತಿಯನ್ನು ಜನ ಹೆಚ್ಚಿನ ಮಟ್ಟಿಗೆ ನಂಬುತ್ತಿಲ್ಲ. ಹಾಗೂ ಒಪ್ಪುತ್ತಿಲ್ಲಾ ಎಂಬ ಭಾವನೆ ಇದೆಯಲ್ಲಾ?

ಡಾ. ಭಾ.: ಬಹಳ ಹಿಂದಿನಿಂದಲೂ ಎಲ್ಲಾ ಸರಕಾರಿ ಹಾಗೂ ಖಾಸಗಿ ಆರೋಗ್ಯ ಕೇಂದ್ರಗಳಲ್ಲಿ ನವೀನ ಪದ್ಧತಿಯನ್ನೇ ಅಂದರೇ ಅಪೋಪತಿಯನ್ನು ಅನುಸರಿಸಿಕೊಂಡು ಹಾಗೂ ಅವಲಂಬಿಸಿಕೊಂಡು ಬಂದವು. ಆಯುರ್ವೇದ ಔಷಧಿಯ ಬಗ್ಗೆ ಪ್ರಚಾರದ ಕೊರತೆ ಇದೆ. ಮುಖ್ಯವಾಗಿ ರೋಗಿಗಳಲ್ಲಿ ನಂಬಿಕೆ ಇರಬೇಕು.

ಕೊ. ಸಂ. : ಆಯುವೇದ ಪದ್ಧತಿಯಲ್ಲಿ ನೀವು ಯಾವ್ಯಾವ ರೋಗಗಳಿಗೆ ಚಿಕಿತ್ಸೆ ನೀಡುವಿರಿ?

ಡಾ. ಭಾ.:ಎಲ್ಲಾ ತರಹದ ಕಾಯಿಲೆಗಳಿಗೆ ಔಷಧಿ ಕೊಡಲಾಗುವುದು. ಆದರೇ ರೋಗದ ಅವಧಿಯ ಮೇಲೆ ಅವಲಂಬಿತವಾಗಿದೆ. ಉದಾ: ಸಕ್ಕರೆ ಕಾಯಿಲೆ (ಡಯಾಬಿಟಿಸ್) ಕೆಲವು ಸೀಮಿತ ರೋಗಗಳಿಗೆ ಆಯುರ್ವೇದ ಔಷಧಿ ರಾಮಬಾಣ ಉದಾ: ಪಾರ್ಶ್ವವಾಯು, ಜಾಂಡೀಸ್ ಇತ್ಯಾದಿ.

ಕೊ. ಸಂ.: ಆಯುರ್ವೇದ ಪದ್ಧತಿಯಲ್ಲಿ ಮುಂದೆ ಅದರ ಭವಿಷ್ಯವೇನು?

ಡಾ. ಭಾ: ಈ ಪದ್ಧತಿಯ ಔಷಧ ವಿಧಾನಕ್ಕೆ ಉತ್ತಮ ಭವಿಷ್ಯವಿದೆ. ಆದರೆ ಇದರ ಬಗ್ಗೆ ಜನರಲ್ಲಿ ನಂಬಿಕೆ ಬರಬೇಕು. ಸೊಂಟ ನೋವು, ಕೀಲುನೋವು, ತಲೆ ನೋವು ಪಾರ್ಶ್ವವಾಯು ಮತ್ತು ಸ್ತ್ರೀರೋಗ (ರಕ್ತ ಸ್ರಾವ, ಸಂತಾನ ಪ್ರಾಪ್ತಿ ಬಿಳಿಸೆರಗು) ಇತ್ಯಾದಿಗಳಿಗೆ ಸೂಕ್ತ ಔಷಧಿ.

ಡಾ. ಎ. ಪಿ. ಭಾರತಿಯವರು ವಿವಾಹಿತರಾಗಿದ್ದು ಇವರ ಪತಿ ಶ್ರೀಯುತ ನೈಯ್ಯಣೀರ ಸತೀಶ್‌ರವರು ಪ್ರಸ್ತುತ ಮಡಿಕೇರಿಯ ಫೀಲ್ಡ್ ಮಾರ್ಷಲ್ ಕಾರ್ಯಪ್ಪ ಪ್ರಥಮ ದರ್ಜೆ ಕಾಲೇಜಿನಲ್ಲಿ ಆಂಗ್ಲ ಭಾಷೆಯ ಉಪನ್ಯಾಸಕರಾಗಿರುವರು.

**ಸಂದರ್ಶನ ಲೇಖನ -ಜೈನೀರ ವೆಂಕಟೇಶ್.**

---

ಮಾನವನು ಉತ್ತಮನಾಗಿರಲು ಕಲಿಸುವ ಪ್ರತಿಯೊಂದು ಧರ್ಮವೂ ಉತ್ತಮವಾದದ್ದೆ ಆಗಿರುತ್ತದೆ.

# ವಿದೇಶ ಪ್ರಯಾಣಕ್ಕೆ ಶುಭ ಹಾರೈಕೆಗಳು

ಗೈನೆಕೋಲಜಿ (ಪ್ರಸೂತಿ ಮತ್ತು ಸ್ತ್ರೀರೋಗ) ವಿಷಯದ ಬಗ್ಗೆ ಇನ್ನೂ ಹೆಚ್ಚಿನ ಉನ್ನತ ವ್ಯಾಸಂಗ, ತರಬೇತಿ ಹಾಗೂ ಕೆಲಸದ ನಿಮಿತ್ತ ಲಂಡನ್‌ಗೆ (United Kingdom) ಇದೇ ಜೂನ್ 3 ರಂದು ಪ್ರಯಾಣ ಬೆಳೆಸುತ್ತಿರುವ ಡಾ|| ಪ್ರವೀಣ್ ಯನ್. ಎಸ್. ಗೆ ಹಾರ್ದಿಕ ಶುಭ ಹಾರೈಕೆಗಳು. ಇವರು ತಮ್ಮ ವೃತ್ತಿಯಲ್ಲಿ ಸಂಪೂರ್ಣ ಯಶಸ್ಸನ್ನು ಪಡೆಯಲಿ. ಗೌಡ ಜನಾಂಗದ ಕೀರ್ತಿಯನ್ನು ಇನ್ನಷ್ಟು ಬೆಳಗಿಸಲಿ. ಕುಲದೇವರು ವೆಂಕಟರಮಣನ ಆಶೀರ್ವಾದ ಇವರ ಮೇಲೆ ಸದಾ ಇರಲಿ ಎಂದು ಹಾರೈಸುವ.







**ಡಾ. ಯನ್ . ಎಸ್. ಪ್ರವೀಣ್**
MBBS, MD., (OBG) DNB, MS (Psychotherapy Conselling)
ಸ್ತ್ರೀರೋಗ ತಜ್ಞರು, ಶಾಂತಿ ಆಸ್ಪತ್ರೆ, ಕ್ಯಾಲಿಕಟ್, ಕೇರಳ.

***ಶುಭ ಹಾರೈಸುವವರು :***

**ತಂದೆ ತಾಯಿ :** ಶ್ರೀಮತಿ ಮತ್ತು ಶ್ರೀ ನೆರಿಯನ ಸೋಮಯ್ಯ ಹಾಗೂ ಸರಸ್ವತಿ, ಮದೆಗ್ರಾಮ, ಮಡಿಕೇರಿ (ನಿವೃತ್ತ ಮುಖ್ಯೋಪಾಧ್ಯಯರು)

**ಮಾವ-ಅತ್ತೆ:** ಶ್ರೀಮತಿ ಮತ್ತು ಶ್ರೀ ಎ. ಪಿ.(A.P.) ಕೃಷ್ಣಪ್ಪ M.A. L.L.B., ನಾಗರತ್ನ ಹಾಗೂ ಮಕ್ಕಳು ಹಿರಿಯ ನ್ಯಾಯವಾದಿಗಳು, ಶಿವಮೊಗ್ಗ.

**ಪತ್ನಿ-ಮಗ:** ಶ್ರೀಮತಿ ಅಶ್ವಿನಿ MBBS, DA (ಅನೇಸ್ತೀಸಿಯಾ) ಹಾಗೂ ಮಗ ಪಲ್ಗುಣ (Palgun)

**ಅಕ್ಕ -ಭಾವ:** ಶ್ರೀಮತಿ ಮತ್ತು ಶ್ರೀ ಮಡಪ್ಪಾಡಿ ರಾಧಕೃಷ್ಣ B.Sc., M.S.W., ಪ್ರಸಾಧಿನಿ ಹಾಗೂ ಮಕ್ಕಳು ಸಜ್ಜನ್, ಮಧುರ. ಅಸಿಸ್ಟೆಂಟ್ ಡೈರೆಕ್ಟರ್ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ, ಬಳ್ಳಾರಿ.

**ಅಣ್ಣ-ಅತ್ತಿಗೆ:** ಶ್ರೀಮತಿ ಮತ್ತು ಶ್ರೀ ನವೀನ್ ಯನ್. ಎಸ್. MBBS, ರಾಜೇಶ್ವರಿ MBBS ಹಾಗೂ ಮಗ ನೀರಜ್. ವೈದ್ಯಾಧಿಕಾರಿಗಳು, ಕುಟ್ಟ. ಹಾಗೂ ಶ್ರೀಮತಿ ಮತ್ತು ಶ್ರೀ ಬಾಲಕೃಷ್ಣ, ರೇಶ್ಮಾ ಹಾಗೂ ಮಗ ಶಶಾಂಕ್ (ನಗರ ಸಭೆ ಇಂಜಿನಿಯರ್, ಮಂಗಳೂರು) ಮತ್ತು ಸ್ನೇಹಿತರು, ಕುಟುಂಬಸ್ತರು ಹಾಗೂ ಬಂಧು ಮಿತ್ರರು.

Reg. No. KA/SK/MYS/88/2003 - 05 RNI No. : 10-01-96 TCI Kar. 09592



# ಸುವರ್ಣ ಮಹೋತ್ಸವ

## ಗೌಡರ ವೀರ ಉಡುಪಿಯಲ್ಲಿ ಶ್ರೀ ಚೋಂಡೀರ ಅಪ್ಪಯ್ಯ ಮತ್ತು ಕಮಲಮ್ಮ ದಂಪತಿಗಳ ದಾಂಪತ್ಯ ಜೀವನದ ಸುವರ್ಣ ಮಹೋತ್ಸವ

## 9.5.1954 - 9.5.2004

50 ವರ್ಷದ ಸುಖಮಯ ದಾಂಪತ್ಯ ಜೀವನ ಸಾಗಿಸುತ್ತಿರುವ ಶ್ರೀಮಾನ್ ಚೋಂಡೀರ ಅಯ್ಯಪ್ಪ (ಜನನ 10-7-1924) ನವರು ತಮ್ಮ ವಿದ್ಯಾಭ್ಯಾಸ ಮುಗಿಸಿ 1944 ರಲ್ಲಿ ಬ್ರಿಟಿಷ್ ಸರಕಾರದ ಸೇನಾ ಸೇವೆಯಲ್ಲಿ Q.M.H. ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಾ ಪ್ರಪಂಚದ 2 ನೇ ಮಹಾ ಯುದ್ಧದಲ್ಲಿ ಜಪಾನು, ಸಿಂಗಾಪುರ, ಜಾವಾ, ಸುಮತ್ರ, ಮಲಯ ಹಾಗೂ ಶ್ರೀಲಂಕಾ ಮುಂತಾದೆಡೆ ಯುದ್ಧದಲ್ಲಿ ಶಿಸ್ತಿನ ಸೇವೆ ಸಲ್ಲಿಸಿ 1953 ರಲ್ಲಿ ನಿವೃತ್ತಿ ಪಡೆದು ಶ್ರೀಮಾನ್ ಮೂಟೇರ ಕುಟ್ಟಪ್ಪ ಬೆಳ್ಯಪ್ಪ ದಂಪತಿಗಳ ಪ್ರಥಮ ಪುತ್ರಿ ಕಮಲಮ್ಮನವರೊಂದಿಗೆ 9-5-1954 ರಂದು ದಾಂಪತ್ಯ ಜೀವನಕ್ಕೆ ಕಾಲಿರಿಸಿದರು. ಅನಂತರ ಕರ್ನಾಟಕ ಸರ್ಕಾರದ ಕೃಷಿ ಇಲಾಖೆಯಲ್ಲಿ ಕೃಷಿ ಅಧಿಕಾರಿಯಾಗಿಯೂ, ಬೈಲುಕೊಪದಲ್ಲಿರುವ ದೊಡ್ಡ ಹರವೆ ಪ್ರಾಜೆಕ್ಟ್‌ನಲ್ಲಿ ಕೃಷಿ ಆಡಳಿತಾಧಿಕಾರಿಯಾಗಿ ಉತ್ತಮ ಸೇವೆ ಸಲ್ಲಿಸಿ 1978 ರಲ್ಲಿ ನಿವೃತ್ತಿ ಪಡೆದು ತುಂಬಿದ ಸಂಸಾರದಲ್ಲಿ ಸಂತೃಪ್ತ ನಿವೃತ್ತಿ ಜೀವನ ನಡೆಸುತ್ತಿದ್ದಾರೆ.

9-5-2004 ರಂದು ವಿವಾಹ ಸುವರ್ಣ ಮಹೋತ್ಸವ ಆಚರಿಸಿಕೊಳ್ಳುತ್ತಿರುವ ಈ ದಂಪತಿಗಳಿಗೆ ಶುಭ ಹಾರೈಸುತ್ತಾ ಇವರುಗಳಿಗೆ ಸದಾ ಆರೋಗ್ಯ ಆಯುಷ್ಯವನ್ನು ದಯಪಾಲಿಸಲೆಂದು ಕುಲದೇವರಲ್ಲಿ ಪ್ರಾರ್ಥಿಸುತ್ತಾ ಆಶೀರ್ವಾದಗಳನ್ನು ಬೇಡುವ.

### *ಶುಭ ಹಾರೈಸುವವರು :-*

ಯಿಂದ: ಶ್ರೀಮಾನ್ ಚೊಂಡೀರ ಎ. ಸುರೇಶ್ B.Com
(Retd Chief Petty Officer ಭಾರತೀಯ ನೌಕಾದಳ)
ಕೆನರಾ ಬ್ಯಾಂಕ್, ಮಡಿಕೇರಿ. ಶ್ರೀಮತಿ ಶೋಭ ಸುರೇಶ್,
B.Sc., B.Ed.,ಸರಕಾರಿ ಪದವಿ ಪೂರ್ವ ಕಾಲೇಜು ಮಡಿಕೇರಿ
ಮತ್ತು ಮಕ್ಕಳಾದ ಸಿ. ಎಸ್. ವಿಕ್ಕಿ ಅಪ್ಪಯ್ಯ,ಸಿ. ಎಸ್. ಶಿಲ್ಪಶ್ರೀ

ಶ್ರೀಮಾನ್ ಚೊಂಡೀರ ಎ. ಕಾರ್ಯಪ್ಪ (ಪ್ರಕಾಶ್)
(Retd. Petty Officerಭಾರತೀಯ ನೌಕಾದಳ)
ಶ್ರೀಮತಿ ರಾಣಿ ಪ್ರಕಾಶ್, B.Sc., Ag.
ಮಕ್ಕಳಾದ ಸಿ. ಕೆ. ಪ್ರೀತಿಕ, ಸಿ. ಕೆ. ಕೃತಿಕ.

ಶ್ರೀಮಾನ್ ಪೋರೆಯನ ಯಂ ಕುಶಾಲಪ್ಪ, (ಪ್ರಕಾಶ್)
INGO RSOLL RAND ಬೆಂಗಳೂರು.
ಶ್ರೀಮತಿ ಜ್ಯೋತಿ ಪ್ರಕಾಶ್, ಭಾರತೀಯ ಕಾಫಿ ಮಂಡಳಿ,
ಬೆಂಗಳೂರು.ಮಕ್ಕಳಾದ ಪಿ. ಡೆಮ್ಮಿ ಕುಶಾಲಪ್ಪ ಪಿ. ಜೆಸ್ಸಿ ಕುಶಾಲಪ್ಪ.

ಶ್ರೀಮಾನ್ ಪಾಂಡನ ಕೆ. ಗಣೇಶ್, ಮಕ್ಕಳಾದ
ಹೆವನ್ ಗಾರ್ಡನ್ ಎಸ್ಟೇಟ್, ಮರಗೋಡು,
ಶ್ರೀಮತಿ ಯಶೋದಾ ಗಣೇಶ್, ಮಕ್ಕಳಾದ
ಪಿ. ಜಿ. ತೀರ್ಥ, ಪಿ. ಜಿ. ಶ್ವೇತ, ಪಿ. ಜಿ. ಅಕ್ಷತ

ಮತ್ತು
ಶ್ರೀಮತಿ ಮತ್ತು ಶ್ರೀಮಾನ್ ಮೂಟೇರ ಕೆ. ನಂಜುಂಡ ಮತ್ತು ಮಕ್ಕಳು, ನಂಜರಾಯ ಪಟ್ಟಣ
ಹಾಗೂ ಚೊಂಡೀರ ಕುಟುಂಬಸ್ಥರು ಮತ್ತು ಬಂಧು ಬಳಗದವರು
ದೂರವಾಣಿ : 08272/224580. 229970

**Kodagu Sangathi** Kannada Fortnightly Edited, Published, Printed by **Pattada Sheelamani, # 12058**
**"Sangathi Nilaya", Vijayanagar IV Stage, II Phase, Hinkal Post, Mysore - 570017. ☎ : 0821/2404290.**
And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ☎ : 0821/2431792.